|| ಶ್ರೀಃ ||

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ.

ಉಡುಪಿ.

ದಾಸರ ಪದಗಳು.

# ವಾದಿರಾಜರಕೀರ್ತನೆ

ಭಾಗ ೧.

ದ್ವಿತೀಯಾವೃತ್ತಿ.

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

1925.

ಬೆಲೆ: ೮ ಆಣೆ.

ಶ್ರೀಗುರುರಾಜೋ ವಿಜಯತೇ ॥





ತಪೋವಿದ್ಯಾ ವಿರಕ್ತ್ಯಾದಿ ಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥

# ಉಪೋದ್ಘಾತವು.

ಈ ಪ್ರಪಂಚದಲ್ಲಿ ಜ್ಞಾನಶೂನ್ಯರಾಗಿ ಅಪಾರ ಸಂಸಾರಸಮುದ್ರದ ದುಃಖತರಂಗಗಳೆಂಬ ದೊಡ್ಡ ದೊಡ್ಡ ಅಲೆಗಳ ಬಡಿದಾಟದಿಂದ್ದ ದುಃಖಿಸುವವರನ್ನು ಜ್ಞಾನವೆಂಬ ವಿಶಾಲ ನಾವೆಯಿಂದ ಪಾರಗಾಣಿಸಲು ಅನೇಕ ಮಹನೀಯರು ಆಗಾಗ ಭೂಮಿಯಲ್ಲವತರಿಸಿರುತ್ತಾರೆ

ಅವರಲ್ಲಿ ಕೆಲವರು ವ್ಯಾಸಕೂಟಾಲಂಕಾರರಾಗಿ ಅನೇಕ ಸಂಸ್ಕೃತ ಗ್ರಂಥಗಳನ್ನು ರಚಿಸಿ ಲೋಕೋದ್ಧಾರಕರಾಗಿರುತ್ತಾರೆ. ಮತ್ತೆ ಕೆಲವರು ದಾಸಕೂಟಾಲಂಕಾರರಾಗಿ ಕನ್ನಡ ಕೀರ್ತನಾದಿಗಳಿಂದ ಪಾಮರ ಜನರಿಗೂ ಉದ್ಧಾರಕರಾಗಿರುತ್ತಾರೆ. ಅದರಲ್ಲೂ ಕೆಲವರು ವ್ಯಾಸಕೂಟ ದಾಸಕೂಟ ಶಿಖಾಮಣಿಗಳೆನಿಸಿ, ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಅನೇಕ ಮಹಾಗ್ರಂಥಗಳನ್ನು ರಚಿಸಿ, ಪಂಡಿತ ಪಾಮರ ಸಾಧಾರಣವಾಗಿ ಜಗತ್ತಿಗೇ ಸುಜ್ಞಾನದೀಪವನ್ನು ಬೆಳಗಿಸುವವರಾಗಿರುತ್ತಾರೆ

ವ್ಯಾಸಕೂಟ ಶಿಖಾಮಣಿಗಳು ಶ್ರೀಮನ್ಮಧ್ವಾಚಾರ್ಯರು, ತ್ರಿವಿಕ್ರಮಪಂಡಿತಾಚಾರ್ಯರು, ಟೀಕಾಚಾರ್ಯರು ಮೊದಲಾದವರು. ದಾಸಕೂಟ ಪ್ರಧಾನರು ಪುರಂದರದಾಸಾದಿಗಳು. ಉಭಯಕೂಟ ಶಿಖಾಮಣಿಗಳು ಶ್ರೀವ್ಯಾಸರಾಯರು, ಶ್ರೀವಾದಿರಾಜತೀರ್ಥರು ಮೊದಲಾದವರು.

ಈ ಶ್ರೀವಾದಿರಾಜಮುನಿಗಳು ಬ್ರಹ್ಮಪದಯೋಗ್ಯರಾದ ಋಜುಗಣಸ್ಥರಲ್ಲಿ ಮುಖ್ಯರೂ, ಮುಂದಿನ ವಾಯುಪದಯೋಗ್ಯರೂ ಆದ ಲಾತವ್ಯನಾಮಕ ದೇವರು. ಇವರು ಶ್ರೀಮಧ್ವಗುರು ಸಾರ್ವಭೌಮರ ಸನ್ಮತೋದ್ಧಾರ ಕಾರ್ಯದಲ್ಲಿ ಯುವರಾಜರಂತೆ ಸಹಾಯಮಾಡಲು ಶ್ರೀಉಡುಪೀಕ್ಷೇತ್ರದ ಉತ್ತರದಲ್ಲಿರುವ ಹೂವಿನಕೆರೆ ಗ್ರಾಮದಲ್ಲಿ ಅವತರಿಸಿ, ಶ್ರೀಮಧ್ವಾಚಾರ್ಯರ ಸೋದರರಾದ ಶ್ರೀವಿಷ್ಣುತೀರ್ಥಾಚಾರ್ಯರ

ಸಂಪ್ರದಾಯಪ್ರವರ್ತಕರಾದ ಶ್ರೀವಾಗೀಶತೀರ್ಥರಿಂದ ಸನ್ಯಾಸ ಪಡೆದು, ಶ್ರೀವಾದಿರಾಜರೆಂಬ ಸಾರ್ಥಕನಾಮಕ್ಕೆ ಪಾತ್ರರಾಗಿ, ಅನೇಕ ವಾದಿಗಳನ್ನು ಗೆದ್ದು, ಅನೇಕ ಸಂಸ್ಕೃತವೇದಾಂತಶಾಸ್ತ್ರ ಗ್ರಂಥಗಳನ್ನು ನಿರ್ಮಿಸಿ. ಪಂಡಿತರನ್ನುದ್ಧರಿಸಿದ್ದಲ್ಲದೆ, ಸಂಸ್ಕೃತಾನಭಿಜ್ಞರ ಉದ್ಧಾರಕ್ಕಾಗಿ ಕನ್ನಡದಲ್ಲಿ ಭ್ರಮರಗೀತೆ, ವೈಕುಂಠವರ್ಣನೆ, ಲಕ್ಷ್ಮೀಶೋಭನಾದಿ ಹಾಡುಗಳನ್ನೂ ಅನೇಕ ಕೀರ್ತನೆಗಳನ್ನೂ ರಚಿಸಿದ್ದಾರೆ. ಇವರು ಈಗಲೂ ಸೋದಾಕ್ಷೇತ್ರದಲ್ಲಿ ಪಂಚವೃಂದಾವನದಲ್ಲಿ ಭಕ್ತರಿಷ್ಟಾರ್ಥವನ್ನು ಕೈಗೂಡಿಸುತ್ತಾರೆಂಬುದು ಆ ಕ್ಷೇತ್ರ ನೋಡಿದವರಿಗೆ ಪ್ರತ್ಯಕ್ಷ. ಇವರ ಆದ್ಯಂತ ಚರಿತ್ರೆಯು ಪ್ರತ್ಯೇಕ ನಮ್ಮಲ್ಲಿ ಪ್ರಕಟಿಸಲ್ಪಟ್ಟಿದೆ. ಇವರು ರಚಿಸಿದ ಹರಿಕೀರ್ತನೆ ಅನೇಕರು ಅಪೇಕ್ಷಿಸಿದ್ದರಿಂದ ಶ್ರಮಪಟ್ಟು ಸಂಗ್ರಹಿಸಿ, ಯಥಾಶಕ್ತಿ ಶೋಧಿಸಿ ಒಂದುಸಲ ಪ್ರಕಟಿಸಿರುತ್ತೇವೆ. ಅದರಲ್ಲಿ ಸರಿಯಾದ ಮೂಲಪುಸ್ತಕ ದೊರಕದೆ ಬಹಳ ತಪ್ಪುಗಳು ತಲೆದೋರಿವೆ. ಈ ದ್ವಿತೀಯಮುದ್ರಣದಲ್ಲಿ ಅನೇಕ ಕೀರ್ತನೆಗಳನ್ನು ತಿದ್ದಿ ತಮ್ಮ ಸಂಗ್ರಹದಲ್ಲಿದ್ದ ಕೆಲವು ದೇವರನಾಮ ಕೊಟ್ಟು ಸಹಾಯಮಾಡಿದ ಹಾಲಿ ಕುಂಸಿ ಸಮೀಪ ಚೋರಡಿ ಯೆಂಬಲ್ಲಿರುವ ಶ್ರೀಯುತ ಯೆ. ಆರ್. ಸಂಜೀವರಾವ್ ಇವರಿಗೂ, ಇದರ ಅನೇಕ ಕೀರ್ತನೆಗಳಿಗೆ ರಾಗ ತಾಳ ಹಾಕಿ ತಿದ್ದಿಕೊಟ್ಟ ಹರಿಕಥಾ ವಿದ್ವಾನ್ ಹಂಡೆ ಶ್ರೀಪಾದದಾಸರಿಗೂ ನನ್ನ ಸಾಷ್ಟಾಂಗ ಪ್ರಣಾಮಗಳು. ಇದರಲ್ಲೂ ಕಾಣಬಹುದಾದ ತಪ್ಪುಗಳು ಶ್ರೀಹರಿ ಚಿತ್ತಕ್ಕೆ ಬಂದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸಲ್ಪಡುವವು.

ಉಡುಪಿ,
ಕ್ರೋಧನ ಮಾರ್ಗಶಿರ
ಶು ೧೨.

ಸುಜನಾಶ್ರಿತ,
ಪಾವಂಜೆ ಗುರುರಾವ್.

# ಅನುಕ್ರಮಣಿಕೆ.



ಸಂಪೂರ್ಣವು.

॥ श्रीः ॥

॥ ಶ್ರೀಗುರುಭ್ಯೋ ನಮಃ ॥

॥ ಶ್ರೀಹಯವದನಾಯ ನಮಃ ॥

# ಶ್ರೀಮದ್ವಾದಿರಾಜರ ಕೀರ್ತನೆಗಳು.

## ಮೊದಲನೆಯ ಭಾಗವು.

कामधेनुर्यथा पूर्वं सर्वाभीष्टफलप्रदा ।
तथा कलौ वादिराजश्रीपादोऽभीष्टदः सतम् ॥

### ೧. ರಾಗ ಪಂತುವರಾಳಿ, ಮಟ್ಟಿತಾಳ.

ಲೋಕಭರಿತನೋ । ಕೃಷ್ಣಾ । ನೇಕಚರಿತನೋ ॥ ಶೋಕ ಜನರ ಮುರಿದು ತನ್ನ । ಏಕಾಂತಭಕ್ತರ ಪೊರೆವ ಕೃಷ್ಣ ॥ ಪಲ್ಲ ॥ ರಾಜಸೂಯ ಯಾಗದಲ್ಲಿ । ರಾಜರಾಜರಿರಲು ಧರ್ಮ ॥ ರಾಜಸುತನು ಇವನೇ ಸಭಾ । ಪೂಜೆಗರ್ಹನೆಂದು ಪೊಗಳ್ದ ॥ ೧ ॥ ಮುಕ್ಕ ನೃಪರ ಜರೆದು ಅಮಿತ । ವಿಕ್ರಮ ಯದುವರನೆ ತನಗೆ ॥ ತಕ್ಕ ರಮಣನೆಂದು ರುಗ್ಮಿಣಿ । ಉಕ್ತಿ ಮನದೊಳೊಲಿದಳಾಗ ॥ ೨ ॥ ಜ್ಞಾನಶೂನ್ಯನಾಗಿ ಸೊಕ್ಕಿ । ತಾನೆ ವಾಸುದೇವನೆನಲು ॥ ಹೀನ ಪೌಂಡ್ರಕನ ಶಿರವ । ಬಾಣರಾಯ ಕಂಡಿಸಿದವ ॥ ೩ ॥ ಉತ್ತರೇಯ ಗರ್ಭದಲ್ಲಿ । ಸುತ್ತಿ ಸುಳಿವ ಅಸ್ತ್ರವನ್ನು ॥ ಒತ್ತಿ ಚಕ್ರದಿಂದ ನಿಜ । ಭಕ್ತ ಪರೀಕ್ಷಿತನ ಪೊರೆದ ॥ ೪ ॥ ತನ್ನ ದಾಸಜನರಿಗೊಲಿದು । ಉನ್ನತುಡುಪಿಯಲ್ಲಿ ನಿಂದು ॥ ಘನ್ನ ಮಂದಿರದೊಳಗಿಹ ಪ್ರ । ಸನ್ನ ಹಯವದನ್ನ ಕೃಷ್ಣ ॥ ೫ ॥ ಶ್ರೀಃ ॥

### ೩. ರಾಗ ಶಂಕರಾಭರಣ, ಆದಿತಾಳ.

ಕೊಂಡಾಡಲಳವೇ ನಿನ್ನಯ ಕೀರ್ತಿ । ಭೂ । ಮಂಡಲದೊಳು ಹಯಗ್ರೀವಮೂರ್ತಿ ॥ ಪಲ್ಲ ॥ ವೇದಂಗಳಾ ಜಲದಿಂದ ತಂದೇ । ನೀ । ಪ್ರೋದಗಿರಿಯ ಬೆನ್ನೊಳಾಂತು ನಿಂದೇ ॥ ಮೇದಿನಿಯಾ ಕದ್ದೊಯ್ದನ ಕೊಂದೇ । ಸಂ । ವಾದದಿಂದ ಕಂಬದಿಂದಲಿ ಬಂದೇ ॥ ೧ ॥ ಚರಣಾಗ್ರದಲಿ ನದಿಯನು ಪೆತ್ತೆ । ತೀಕ್ಷ್ಣ । ಪರಶು ಪಿಡಿದು ಬಾಹುಜರ ಕಿತ್ತೆ ॥ ನೆರೆ ನಂಬಿದಗೆ ಸ್ಥಿರಪಟ್ಟವಿತ್ತೆ । ದೊಡ್ಡ । ದುರುಳ ಕಾಳಿಂಗನ ಶಿರದಿ ನಿಂತೇ ॥ ೨ ॥ ಪತಿವ್ರತೆಯರ ಮಾನ ಛೇದನ । ಬಹು । ಚತುರ ತುರಗವೇರಿ ನಲಿವನಾ ॥ ಕ್ಷಿತಿಯೊಳುತ್ತಮ ವಾದಿರಾಜನ । ಸ್ವಾಮಿ । ಸತತ ರಕ್ಷಿಪ ಶ್ರೀಹಯವದನಾ ॥ ೩ ॥ ಶ್ರೀಃ ॥

### ೪. ರಾಗ ವರಾಳಿ, ಅಟತಾಳ.

ಮಧ್ವಾಂತರ್ಗತ ವೇದವ್ಯಾಸಾ । ಕಾಯೋ । ಶುದ್ಧ ಮೂರುತಿಯೆ ಸರ್ವೇಶಾ ॥ ಪಲ್ಲ ॥ ಶ್ರದ್ಧೆಯಿಂದಲಿ ನಿನ್ನ ಭಜಿಸುವ ಜನರಿಗೆ । ಬುದ್ಧ್ಯಾದಿಗಳ ಕೊಟ್ಟುದ್ಧರಿಸೊ ದೇವರ ದೇವಾ ॥ ಅನುಪಲ್ಲ ॥ ದ್ವಾಪರದಲ್ಲೊಬ್ಬ ಮುನಿಪಾ । ತನ್ನ । ಕೋಪದಿಂದೀಯಲು ಶಾಪಾ ॥ ಶಾಪಿಸಲು ಜ್ಞಾನ ಲೋಪಾ । ವಾಗಿ । ಅಪಾರತತ್ವಸ್ವರೂಪ ॥ ಶ್ರೀಪತಿಯೆ ಕಾಯೆಂದು ಮೊರೆಯಿಡೆ । ಪಾಪವಿರಹಿತಳಾದ ಯಮುನಾ । ದ್ವೀಪದಲಿ ಅಂಬಿಗರ ಹೆಣ್ಣಿನ । ರೂಪಿಗೊಲಿದವಳಲ್ಲಿ ಜನಿಸಿದೆ ॥ ೧ ॥ ವೇದವಾದಿಗಳೆಲ್ಲ ಕೆಡಲೂ । ತತ್ವ । ವಾದಿ ಜನರು ಬಾಯ ಬಿಡಲೂ ॥ ಮೇದಿನಿಸುರರ್ಮೊರೆಯಿಡಲೂ । ನಾನಾ । ಭೇದದಿಂ ಭಾಗ ರಚಿಸಲೂ ॥ ಮೋದದಿಂದ ತದರ್ಥಬೋಧಕ । ವಾದ ಸೂತ್ರ ಪುರಾಣ ವಿರಚಿಸಿ । ವಾದಿಗಳ ನಿರ್ವಾದಮಾಡಿದ ಸಾಧುವಂದಿತ ಬಾದರಾಯಣಾ ॥ ೨ ॥ ಸುಮತಿಗಳಿಗೆ ನೀ ಬೋಧಿಸಿದೇ । ಮಿಕ್ಕ । ಕುಮತಂಗಳನು ಛೇದಿಸಿದೇ ॥ ಕ್ರಮದಿಂದ ರಾಜ್ಯವಾಳಿಸಿದೇ । ಜಗತ್ । ಸ್ವಾಮಿ ನೀನೆಂದು ತೋರಿಸಿದೇ ॥ ಕಮಲನಾಭನೆ ವಿಮಲರೂಪನೆ । ರಮೆಯ ಅರಸನೆ ರಮ್ಯ ಚರಿತನೆ । ಮಮತೆಯಲಿ ಕೊಡು ಕಾಮಿತಾರ್ಥವ । ನಮಿಸುವೆನು ಹಯವದನಮೂರುತೀ ॥ ೩ ॥

## ೪. ರಾಗ ಕಾಂಬೋಧಿ, ಝಂಪೆತಾಳ.

ನಮಸ್ತೇ ವಿಮಲ ಕೋಮಲ ರಮಾದೇವಿ । ನಮಸ್ತೆ ನಮಸ್ತೇ ॥ ॥ ಪಲ್ಲ ॥ ತರುಣೀಮಣಿಯೆ ನಿನ್ನ ಶೀಲಸೌಂದರ್ಯವನು । ಧರೆಯೊಳಗೆ ವರ್ಣಿಸುವ ಕವಿಯು ದಾವಾ ॥ ಸ್ವರಮಣನೆಂದೆನಿಪ ರಮಣನುರದೊಳು ನೀನು । ಅರಮನೆಯ ಮಾಡಿ ಛಾಪುರಿ ಮೆರೆವೆ ಮುದದೀ ॥ ॥ ೧ ॥ ತನ್ನ ವ್ಯೈಯಿಂದ ಮಕ್ಕಳ ಸೃಜಿಸಿ ಯುಗಯುಗದಿ । ನಿನ್ನ ತಾರುಣ್ಯ ಲಾವಣ್ಯಗಳನೂ ॥ ಮನ್ನಿಸಿಯೆ ಪೊರೆವ ಶ್ರೀಹರಿಯ ಪಟ್ಟದ ರಾಣಿ । ಮಾನ್ಯ ಚೈತನ್ಯ ಲಾವಣ್ಯ ಗುಣಸದನೆ ॥ ೨ ॥ ನಿನ್ನಂಗ ಅಷ್ಟಿ ನೋಡುತ ಮುಖವ ಚುಂಬಿಸಲು । ಉನ್ನಂತ ಕರವಕ್ತ್ರನೇತ್ರಗಳನೂ ॥ ಪೂರ್ಣ ಹಯವದನ ಕೈಕೊಂಡ ನಿನ್ನ ಗಂಡ । ಸ್ವರ್ಣಸಮವರ್ಣ ಕರ್ಣಾಯತಾಕ್ಷೀ ॥ ೩ ॥ ಶ್ರೀ ॥

## ೫. ರಾಗ ಕಲ್ಯಾಣಿ. ತ್ರಿಪುಟತಾಳ.

ಆಂಜನೇಯನೆ । ಅಮರವಂದಿತ । ಕಂಜನಾಭನ ದೂತನೇ ॥ ॥ ಪಲ್ಲ ॥ ಮಂಜಿನೋದಕದಂತೆ ಶರಧಿಯ । ದಾಟಿದಾ ಮಹಧೀರನೇ ॥ ॥ ಅನುಪಲ್ಲ ॥ ಆಂಜನೇಯನೆ ನಿನ್ನ ಗುಣಗಳ । ಪೊಗಳಲಳವೆ ಪ್ರಖ್ಯಾತನೇ ॥ ಸಂಜೀವನವಾ ತಂದು ಸಲಹಿದೆ । ಕಂಜನಾಭನ ದೂತನೇ ॥ ॥ ೧ ॥ ಕಾಮನಿಗ್ರಹನೆನಿಸಿ ಸುರರಭಿ । ಮಾನಿಯೆನಿಸಿದ ದೇವತೇ ॥ ರಾಮಪಾದಕೆ ನಮಿಸಿ ನಡದೆ ನ । ಸ್ಸೀಮನಹುದೋ ಮಾರುತೀ ॥ ೨ ॥ ಜನಕತನುಜೆಯ ಮನವ ಹರ್ಷಿಸಿ । ವನವ ನೀ ಕಿತ್ತಾಡಿದೇ ॥ ದನುಜರನ್ನಾಸದೆದು ಲಂಕೆಯ । ಅನಲಗಾಹುತಿ ಮಾಡಿದೇ ॥ ೩ ॥ ಶ್ರೀರಾಮಕಾರ್ಯದಿ ಅಕ್ಷಯಕುಮಾರನಾ ಸಂಹರಿಸಿದೇ ॥ ಘೋರರಾಕ್ಷಸರೆನ್ನುವರನೂ ಮಾರಿವಶವನು ಗೈಸಿದೇ ॥ ೪ ॥ ಬಂದ ಕಾರ್ಯವ ಇಂದಿರೆಗೆ ಮುದದಿಂದ ನೀ ಬಿನ್ನೈಸಿದೇ ॥ ತಂದ ಗುರುತ ಶ್ರೀಹಯವದನನ ಮುಂದಿರಿಸಿ ನೀ ನಮಿಸಿದೇ ॥ ೫ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬. ರಾಗ ನಾಟಿ, ಝಂಪೆತಾಳ.

ಭೀಮ ನಿಸ್ಸೀಮಮಹಿಮಾಗಣಿತಗುಣಸ್ತೋಮ ॥ ಪಲ್ಲ ॥ ಕಾಮ ಪಿತನ ಬಂಟ । ನೆನೆವರಿಗೆ ನೆಂಟಾ ॥ ಅನುಪಲ್ಲ ॥ ನಿನ್ನಯ ಮಹತ್ತರದ ಶಕ್ತಿಯಿಂದಲಿ ಕಲಿಯ । ಬಣ್ಣಗೆಡಿಸಿದೆ ಪಿಡಿದು ಗದೆಯಿಂದ ಸದೆದೂ ॥ ಇನ್ನಾರು ನಿನಗೆ ಸರಿ ರಿಪುಕದಳಿ ಮತ್ತಕರಿ । ಎನ್ನ ರಕ್ಷಿಸಯ್ಯಾ ಪಿಡಿ ಬೇಗ ಕಯ್ಯಾ ॥ ೧ ॥ ಕುಂತಿಯಾ ಸುಕುಮಾರ ಕುರುಕುಲವನ ಕುಠಾರ । ಅಂತರಂಗದ ಶುದ್ಧಿಮಾಡು ಮನ ತಿದ್ದಿ ॥ ಸಂತಾಪಗಳ ಕೆಡಿಸೊ ಹರಿಭಕುತಿಯನು ಕೊಡಿಸೋ । ಚಿಂತ್ಯ ಬಲಶೌರ್ಯ ದುರ್ಜನ ಕುಮುದಸೂರ್ಯಾ ॥ ೨ ॥ ದೇವ ವಿಷಲಡ್ಡಿಗೆಯನುಂಡೆ ದಕ್ಕಿಸಿಕೊಂಡೆ । ಭಾವಶುದ್ಧದಿ ಮರೆಯ ಹೊಕ್ಕೆ ನೀ ಹರಿಯಾ ॥ ಆವಾವ ಸಮಯದಲಿ ನೆನಪು ಕೊಡು ನಿನ್ನಲ್ಲಿ । ದೇವ ನಿನಗೆಣೆಗಾಣೆ ಹರಿಪದಗಳಾಣೇ ॥ ೩ ॥ ಬಕ ಮಗಧ ಕಿಮ್ಮೀರರಿಪುವೆ ಘನ ಸಮೀರ । ನಖದಗ್ರದಲಿ ಕೊಂಡೆ ರಣದೊಳಗೆ ನಿಂದೆ ॥ ಭಕುತಿಯಲಿ ನಿನ ಪಾದ ಭಜಿಸುವವರಿಗೆ ಮೋದ । ಯುಕುತಿಯಲಿ ನುಡಿಸೊ ವಾದಿಗಳೋಡಿಸೊ ॥ ೪ ॥ ದುರುಳ ದೈತ್ಯರ ವೈರಿ ಖಳಕುಲಕೆ ನೀ ಮಾರಿ । ಬಿರಸು ಭವಭಯಹಾರಿ ಸುಜನರುಪಕಾರಿ ॥ ಹರಿಭಕುತಿ ತೋರಿಸಿದೆ ಮುಕುತಿಪಥ ಸೇರಿಸಿದೆ । ಪೊರೆಯಯ್ಯಾ ಹಯವದನ ಶರಣ ಇದು ಕರುಣಾ ॥ ೫ ॥ ಶ್ರೀಃ ॥

## ೭. ರಾಗ ಭೈರವಿ, ಅಟತಾಳ-

ಆರ್ಯನ್ನಾ ಯೋಗ ಧಾರ್ಯನ್ನಾ । ಭಜಿಸಿ । ವರ್ಯನ್ನ ಮಧ್ವಾಚಾರ್ಯನ್ನಾ ॥ ಪಲ್ಲ ॥ ಅಕಳಂಕ ಮಹಿಮಾ ಚಾರಿತ್ರನ್ನ । ಈ । ಸಕಲ ಭುವನ ಪವಿತ್ರನ್ನಾ ॥ ಪ್ರಕಟಭಾರತಿ ಸತ್ಕಳತ್ರನ್ನಾ । ಪಾಪ । ನಿಕರ ಕಾನನವೀತಿಹೋತ್ರನ್ನಾ ॥ ೧ ॥ ನಿರ್ಜಿತ ಪಾಷಂಡ ಯೋದ್ಧನ್ನಾ । ದೋಷ । ವರ್ಜಿತ ಭವದುಃಖಾಬದ್ಧನ್ನ ॥ ಸಜ್ಜನದುರಿತನಿರೋದ್ಧನ್ನಾ । ದೋಷ । ವರ್ಜಿತ ಗುಣಪೂರ್ಣಬೋಧನ್ನಾ ॥ ೨ ॥ ಸದಮಲಲಕ್ಷಣ

ತುಂಗನ್ನಾ । ಸಿರಿ । ಸದನನ್ನ ಕರುಣಾಂತರಂಗನ್ನಾ ॥ ಮದಮೋಹ
ತಿಮಿರಪತಂಗನ್ನಾ । ಹಯ । ವದನನ ಚರಣಾಬ್ಜಭೃಂಗನ್ನಾ ॥ ೩ ॥

## ೮. ರಾಗ ತೋಡಿ, ಆದಿತಾಳ.

ವಾಣೀ ಪರಮ ಕಲ್ಯಾಣೀ । ನಮೋ ನಮೋ ಅಜನ ರಾಣೀ ।
ಪಂಕಜಪಾಣೀ ॥ ಪಲ್ಲ ॥ ಭಳಿಭಳಿರೆ ಭಳಿರೆಂಬ ಭಕ್ತಜನ ಸುಖದಾಂಬೆ ।
ಸುಳಿದಾಡು ಶುಭ ನಿತಂಬೆ ॥ ಅಮ್ಮ ನಿಮ್ಮ । ಹೊಳೆವ ಸನ್ಮುಖದಾ
ಬಿಂಬೆ । ಸರಿಗಾಣೆ ಇಳೆಯೊಳಗೆ ಶಾರದಾಂಬೇ । ಚಿನ್ನ ಬೊಂಬೇ ॥
॥ ೧ ॥ ಶರಣು ಶರಣೆಲೆ ದೇವಿ । ಸ್ಮರಣೆಮಾತ್ರದಿ ಕಾವಿ । ಸುರರಿಗೆ ಸುಲಭ
ದಿಂದೊಲಿವಿ । ನಲಿನಲಿವಾಭರಣಗಳ ನಟಿಪ ಠೀವೀ । ಧರೆಯೊಳಗೆ
ಹರಿಣಾಕ್ಷಿ ಪೊರೆಯೆ ಸೇವಿ । ತರ ವಾಗ್ದೇವೀ ॥ ೨ ॥ ಜಯ ಜಯತು
ಜಗನ್ಮಾತೆ । ಜಗದೊಳಗೆ ವಿಖ್ಯಾತೆ । ದಯಮಾಡು ಧವಳಗೀತೆ ॥
ಸತತ ಶ್ರೀ । ಹಯವದನಪದಕೆ ಪ್ರೀತೆ । ಇಳೆಯೊಳಗೆ । ನಯದಿ ಗೆಲಿಸೆನ್ನ
ಮಾತೇ । ವಿಧಿಕಾಂತೆ ॥ ೩ ॥ ಶ್ರೀಃ ॥

## ೯. ರಾಗ ಕೇದಾರಗೌಳ, ಅಟತಾಳ.

ಧವಳಗಂಗೆಯ ಗಂಗಾಧರ ಮಹಾಲಿಂಗಾ । ಮಾ । ಧವನ
ತೋರಿಸಯ್ಯ ಗುರುಕುಲೋತ್ತುಂಗಾ ॥ ಪಲ್ಲ ॥ ಅರ್ಚಿಸಿದವರಿಗಭೀ
ಷ್ಟವ ಕೊಡುವಾ । ಹೆಚ್ಚಿದ ಅಘಗಳ ತರಿದು ಬಿಸುಡುವಾ ॥ ದುಶ್ಚರಿತ
ಗಳೆಲ್ಲ ದೂರದಲ್ಲಿಡುವಾ । ನ । ಮ್ಮಚ್ಯುತಗಲ್ಲದ ಅಸುರರ ಬಡಿವಾ ॥
॥ ೧ ॥ ಮಾರನ ಗೆದ್ದ ಮನೋಹರ ಮೂರ್ತಿ । ಚಾರು ಸಜ್ಜನರಿಗೆ
ಸುರಚಕ್ರವರ್ತಿ ॥ ಧಾರುಣಿಯೊಳಗೆ ತುಂಬಿದೆ ನಿನ್ನ ಕೀರ್ತಿ ।
ಹರಿಯ ತೋರಿಸಯ್ಯ ನಿನಗೆ ಶರಣಾರ್ತಿ ॥ ೨ ॥ ಚೆನ್ನ ಪ್ರಸನ್ನ ಶ್ರೀ
ಹಯವದನನ್ನ । ಅನುದಿನ ನೆನೆವಂತೆ ಮಾಡೊ ನೀಯೆನ್ನ ॥ ಅನ್ಯನ
ಲ್ಲವೊ ನಾನು ಗುರುವೆಂಬೆ ನಿನ್ನ । ಇನ್ನಾದರು ತೋರೋ ಧೀರ
ಮುಕ್ಕಣ್ಣಾ ॥ ೩ ॥ ಶ್ರೀಃ ॥

### ೧೦. ರಾಗ ಪೂರ್ವಿ. ಆದಿತಾಳ.

ಭದ್ರಾಣಿ ದೇಹಿ ಗೌರಿ ರುದ್ರಾಣಿ । ಭೂರ್ಯಾಭರಣೆ । ಭದ್ರಾಣಿ ॥ ॥ ಪಲ್ಲ ॥ ಗರ್ವಾದಿನಿರ್ವಿತಾನಿ । ದುರ್ವಾಸದುಃಖದಾನಿ ॥ ಸರ್ವಾಣಿ ಘಾತಕಾನಿ । ಶರ್ವಾಣಿ ಭಿಂಧಿತಾನಿ ॥ ೧ ॥ ಅಂಭೋಜನಾಭಮಹಿತೇ । ರಂಭೋರು ಶಂಭುದಯಿತೇ ॥ ಗಾಂಭೀರ್ಯಸುಗುಣಸಹಿತೇ । ಕುಂಭೋದ್ಭವಾದಿವಿನುತೇ ॥ ೨ ॥ ಇಂದೀವರಾಭನಯನೇ । ನಂದಿತಹಯವದನೇ ॥ ಕುಂದಕುಡ್ಮಲರದನೇ । ಚಂದ್ರಸಹಸ್ರವದನೇ ॥ ೩ ॥ ತ್ರಿಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥

### ೧೧. ರಾಗ ಆನಂದಭೈರವಿ, ಅಟತಾಳ.

ಬಾರಯ್ಯ ದಯಮಾಡಿ । ತ್ವರಿತಾದಿ ಬೇಗ । ಬಾರಯ್ಯ ದಯಮಾಡೀ ॥ ಪಲ್ಲ ॥ ಒದರಲು ಕರಿರಾಜ । ನೊದಗಿ ಬಂದೆ ಅಲ್ಲಿ ॥ ಮದಭಯ ಭಾಗ್ಯವು । ಒದಗಿದುಬ್ಬಸದಿಂದ ॥ ೧ ॥ ಸ್ತಂಭದಿ ನರಹರಿ । ಎಂಬಾ ಭಾವದಿ ಬಂದು ॥ ಕುಂಭಿನಿಪತಿ ಬಹು । ಸಂಭ್ರಮ ಗೊಳುತಲಿ ॥ ೨ ॥ ನರನು ಅರ್ಚಕನೆತ್ತ । ನರಹರಿ ನೀನೆತ್ತ ॥ ಕರುಣದಿ ಬರಬೇಕು । ಸಿರಿ ಹಯವದನಾ ॥ ೩ ॥ ತ್ರಿಃ ॥

### ೧೨. ರಾಗ ಮುಖಾರಿ, ಝಂಪೆತಾಳ.

ಸಕಲ ಸಾಧನವೆನಗೆ ಕೈಸೇರಿತೂ । ಮುಕುತಿಯಾ ಮಾತಿಗೆ ಬಾರದಾ ಧನವೂ ॥ ಪಲ್ಲ ॥ ಸಂಸಾರದಲಿ ಜ್ಞಾನ ಸತಿಸುತರಲಿ ಭಕುತಿ । ಕಂಸಾರಿ ಪೂಜೆಯಲಿ ವೈರಾಗ್ಯವೂ ॥ ಸಂಶಯದ ಜನರಲ್ಲಿ ಸಖತನವ ಮಾಡುವೆನು । ಹಿಂಸೆಪಡಿಸುವೆ ಸುಜನಸಂಘವನು ರಂಗಾ ॥ ೧ ॥ ವಿಷಯಂಗಳಲಿ ಧ್ಯಾನ ಲೌಕಿಕದಲಿ ಮನನ । ವಶವಲ್ಲದ ಕಥೆಯ ಕೇಳಮನವೂ ॥ ಹಸನಾಗಿ ಎಣಿಸುವಾ ಹಣಹೊನ್ನಿನಾ ಜಪವು । ಬಿಸಿಲೊಳಗೆ ಸಂಚರಿಸುವದೆ ಮಹಾ ತಪವೂ ॥ ೨ ॥ ಪೀಠಪೂಜೆಂಬುವದು ಲಾಜಚೂರಣವಯ್ಯ । ಮಾಟದ ಪಯೋಧರವೆ ಕಲಶಪೂಜೇ ॥ ಚೂಟಿಯಲಿ ಉದರದಾ ಯಾತ್ರೆಯೇ ಮಹಾಯಾತ್ರೆ । ಬೂಟಕಾತನದಿ

ಅನೃತ ಪೇಳ್ವುದೇ ಮಂತ್ರಾ ॥ ೩ ॥ ಹೆಂಡತಿಯ ಕೊಂಡೆಯದ ಮಾತುಗಳೆ ಉಪದೇಶ । ಚಂಡ ಕೋಪವೆಂಬುದಗ್ನಿಹೋತ್ರಾ ॥ ಪಂಡಿತನು ನಾನಾಗಿ ಅವಿಧೇಯರನು ಸೇರಿ । ಕಂಡಕಡೆ ವಾದಿಸುವದೆ ತರ್ಕವಯ್ಯಾ ॥ ೪ ॥ ಓದಿದೆನು ಯೆಲ್ಲಣ್ಣಾ ಕಲ್ಲಣ್ಣಾ ಎನ್ನುತಲಿ । ವೇದವೆಂಬುದೆ ಯೆನಗೆ ಪಗಡೆಪಂಚೆ ॥ ಸಾಧಿಸಿ ಈಪರಿಯ ಧನವನ್ನು ಕೂಡ್ಹ್ಯಾಕಿ । ಮೋದಿ ಶ್ರೀಹಯವದನ ನಿನ್ನ ಮರತೇ ॥ ೫ ॥ ಶ್ರೀಃ ॥

## ೧೩. ರಾಗ ಪೂರ್ವಿ, ಮಟ್ಟೆತಾಳ.

ಎನ್ನನುದ್ಧರಿಸಲಾಗದೇ । ಚನ್ನರಾಯ । ಎನ್ನನುದ್ಧರಿಸಲಾಗದೇ ॥ ಪಲ್ಲ ॥ ಎನ್ನನುದ್ಧರಿಸಲಾಗದೆ । ಚನ್ನರಾಯ ಬಿನ್ನೈಸುವೆ ॥ ಇನ್ನು ಬೇರೆ ಗತಿಯ ಕಾಣೆ । ನಿನ್ನ ಚರಣ ಕಮಲದಾಣೆ ॥ ಅನುಪಲ್ಲ ॥ ಶರಣ ಜನರ ಪಾಲ ಕಲ್ಪ । ತರು ದಯಾಸ್ವರೂಪನೆಂದು । ಧರೆಯೊಳಗಖಿಳ ನಿಗಮ ಉಸುರು । ಇರಲು ನಿನ್ನ ಚರಣವನ್ನು ॥ ಶಿರದೊಳಾಂತು ಎನ್ನ ಮೇಲಣಾ । ಕರುಣವಿಲ್ಲದಿರಲು ನಿನಗಿದೇನು ಕಾರಣಾ । ಸಲಹಬೇಕು । ಸುರರ ಮಸ್ತಕದ ಸುಭೂಷಣಾ ॥ ಚನ್ನರಾಯ ॥ ೧ ॥ ಹಿಂದೆ ನಾನನಾಥನಾಗಿ । ಒಂದೆರಡಲ್ಲ ಹಲವು ಜನ್ಮ । ಬಂದು ನರಕಯಾತನೆಯಿಂದ । ನೊಂದು ಬಳಲಿ ಬಾಯ ಬಿಡುತ ॥ ಒಂದೆ ನಿನ್ನ ಹೆಸರುಗೊಂಡೆನೇ । ಸನಾಥನಾಗಿ । ಮುಂದೆ ನಾಮಸುಧೆಯನುಂಡೆನೇ । ನೀನೇ ಕೃಪಾಳು । ಎಂದು ನುಡಿವರನ್ನು ಕಂಡೆನೋ ॥ ಚನ್ನರಾಯ ॥ ೨ ॥ ಹಲವು ಮಾತನಾಡಲೇಕೆ । ಒಲಿವದಿನ್ನು ಹರಿಯೆ ನಿನ್ನ । ಸಲಿಗೆಯೊಳೀ ಬಿನ್ನಪವನು । ಸಲಿಸುತಿಹೆನು ಮುಂದಕಿನ್ನು ॥ ಜನುಮ ಬಾರದಂತೆ ವರವನೂ । ಇತ್ತು ಎನ್ನ । ಸಲಹೊ ಪೊರೆಯೆ ನಿನ್ನ ಕರೆವೆನೂ । ಮುಂದೆ ಮುಕುತಿ ಲಲನೆಯೊಡನೆ ಸುಖದಲಿರುವೆನೂ ॥ ಚನ್ನರಾಯಾ ॥ ೩ ॥ ಲೇಶವರಿಯೆ ನಾನು ನಿನ್ನ । ದಾಸನೆಂದು ಡಂಗುರವನು । ಹೊಯ್ಸಿ ತಿರುಗುತಿರಲು ಮೋಹ । ಪಾಶವೆನ್ನ ಸುತ್ತಿಕೊಂಡು ॥ ಘಾಸಿಮಾಡುತಿರಲು ಬಿಡಿಸದೇ । ಇರಲಿ ಪಂಥ । ವಾಸಿಯೆನ್ನಮಾತಾಲಿಸದೇ ಸಲಹು ಸ । ರ್ವೇಶ

ನಂಬಿದವರ ಕೆಡಿಸದೇ ॥ ಚನ್ನರಾಯಾ ॥ ೪ ॥ ಎನ್ನ ದುರ್ಗುಣವನು ಮರೆದು । ನಿನ್ನ ಸದ್ಗುಣದಲಿ ಪೊರೆದು । ಮನ್ನಿಸಿದರೆ ಲೋಕದೊಳಗೆ । ಧನ್ಯನಹೆನು ಜನುಮವೆತ್ತಿ ॥ ಉನ್ನತವಾಹುದು ನಿನ್ನ ಕೀರುತಿ ನಾಶವಹುದು । ಎನ್ನ ಬಹಳ ಭವದ ಧಾವತೀ । ಇನ್ನು ಸಲಹೊ । ಚನ್ನ ಶ್ರೀಹಯವದನಮೂರುತೀ ॥ ಚನ್ನರಾಯಾ ॥ ೫ ॥ ಶ್ರೀಃ ॥

## ೧೪. ರಾಗ ಮಧ್ಯಮಾವತಿ, ಅಟತಾಳ.

ನೆರೆ ನಂಬಿ ಪಡೆಯಿರೊ ಹಿತವಾ । ನಮ್ಮ । ಗುರುವರ ಮಧ್ವ ಮುನಿಯ ಸನ್ಮತವಾ ॥ ಪಲ್ಲ ॥ ತ್ರೇತೆಯೊಳಂಜನೆ ತನಯಾ । ನಾಗಿ । ಸೀತಾಪತಿ ರಘುನಾಥಗೆ ಪ್ರಿಯಾ ॥ ದೂತಾತನದಿ ಖಳತತಿಯಾ । ಕೊಂದು । ಖ್ಯಾತಿಪಡೆದ ಹನುಮನಾದ ಯತಿಯಾ ॥ ೧ ॥ ದ್ವಾಪರದಲಿ ಭೀಮನೆನಿಸೀ । ಪಾಂಡು । ಭೂಪನರಸಿ ಕುಂತೀದೇವಿಯೊಳ್ ಜನಿಸೀ ॥ ಶ್ರೀಪತಿಗರ್ತಿಯ ಸಲಿಸೀ । ದೈತ್ಯ । ರೂಪ ನೃಪರ ಕೊಂದಾ ಮುನಿಪನ್ನ ಭಜಿಸೀ ॥ ೨ ॥ ಕಲಿಯುಗದಲಿ ಯತಿಯಾಗೀ । ದೈತ್ಯ । ಬಲದಿ ಮಾಡಿದ ಶಾಸ್ತ್ರ ಮುರಿದ ವೈರಾಗೀ ॥ ಕುಲಗುರು ಶ್ರೀಮಧ್ವಯೋಗೀ । ಅತಿ । ಬಲ ಹಯವದನನ ಭಟನೆಂದು ಬಾಗೀ ॥ ೩ ॥ ಶ್ರೀಃ ॥

## ೧೫. ರಾಗ ತೋಡಿ, ಏಕತಾಳ.

ಪ್ರಾಣನ ನೋಡಿರೈ । ಮುಖ್ಯ । ಪ್ರಾಣನ ಪಾಡಿರೈ ॥ ಪಲ್ಲ ॥ ಕ್ಷೋಣಿಯೊಳಗೆ ಯೆಣೆರಹಿತ ಪಾವನಚರಿತ ಸದ್ಗುಣಭರಿತಾ ॥ ಅನುಪಲ್ಲ ॥ ಮರ್ಕಟ ರೂಪಿಲೆ ಅವತರಿಸಿದ ಅಂಜನೆಸುತನೋ । ಮಹಾ ಅದ್ಭುತನೋ । ತರಣಿಗೆ ಮುಟ್ಟಿ ಹಾರಿದ ಬಾಲದಾ ಶ್ರುತಿಯೋ । ವಿಕ್ರಮಗತಿಯೋ ॥ ಸುರರಾಯುಧ ನೆಗ್ಗಿಸಿದಾ ಕಪಿಯಗ್ರಣಿಯೋ । ವಜ್ರದ ಖಣಿಯೋ ॥ ಶರಣವಂದಿತ ಮೂರ್ಲೋಕ ಗುರುವೋ । ಕಲ್ಪತರುವೋ ॥ ॥ ೧ ॥ ರಾಮ ಪಾದಾಂಬುಜಬಿಂಬ ಪರಾಗಾಮಧುಪನೋ । ದೇವಾಧಿಪನೋ ॥ ತಾಮಸ ರಾವಣನೆದೆಗೊತ್ತಿದ ಈ ಕರವೋ । ಶಿಡಿಲಬ್ಬರವೋ ॥ ಪ್ರೇಮದಿ ರಣದೊಳಗ್ಹಾರಿ ರಥವನೊದ್ದ ಮಾರುತಿಯೋ । ಪುಣ್ಯಮೂ

ರುತಿಯೋ ॥ ರೋಮಕೆ ಸಿಲ್ಕಿದ ಹನುಮಾನ ಬಲದ ಸರಳೋ । ದೈತ್ಯರಂ
ಗುರುಳೋ ॥ ೨ ॥ ಕ್ಷಣದೊಳು ಸಂಜೀವನ ಗಿರಿಯನೆ ತಂದ ತಪವೋ ।
ತಾ ನೃಪಪಿತವೋ ॥ ವನಜನಾಭನಾ ಪಾದ ಪಡದಂಥಾ ಪದವೋ ।
ಸಾಗರ ಮದವೋ ॥ ನೆನೆಯಲು ದುರಿತನಿವಾರಣ ಕರುಣಾವಾರಿಧಿಯೋ ।
ಭಕ್ತರ ಸುಧೆಯೋ ॥ ಅನುದಿನದಲಿ ಹಯವದನನ ನೆನೆಯುವ ದಯ
ವೋ । ಗತಿ ಆಶ್ರಯವೋ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬. ರಾಗ ಶಂಕರಾಭರಣ, ಆದಿತಾಳ.

ಬಿಟ್ಟು ಬನ್ನಿರೋ ಸಂಸಾರದ್ಹಂಬಲಾ । ಸೃಷ್ಟಿಪತಿಯ ಸೇವೆಮಾಡಿ
ತುತಿಸಿ ಬದುಕಿರೊ ॥ ಪಲ್ಲ ॥ ಹೆಂಡರು ಮಕ್ಕಳು ಯೆಂಬಂಥ ಹಂ
ಬಲಾ ಬೇಡಿರೋ ॥ ಕೊಂಬುವರುಂಟು ಕೊಡುವರಿಲ್ಲ ಮುಂದಿನ ಗತಿ
ಗಳ ॥ ೧ ॥ ನಡು ಕೇರಿಯಲಿ ನಿನ್ನ ಸುಲಿವರು ॥ ಕುಡಿಹುಬ್ಬು ಕಡೆ
ಗಣ್ಣ ನೋಟದಿಂದಿರುವರೊ ॥ ೨ ॥ ಎಷ್ಟು ಮಾಡಿ ಘಳಿಸಿ ತಂದರೆ
ಸಾಲದೆಂಬುವರೋ ॥ ನಷ್ಟಮಾಡಿ ನಿನ್ನ ಬದುಕು ಕೆಡಿಸಿ ತಿಂಬುವ
ರೊ ॥ ೩ ॥ ಉಂಡು ತಿಂದು ಗುಂಡಿನಂತೆ ಮನೆಯವರಿರುವರೊ । ದಂಡ
ಧರ ಯಮನ ದೂತರು ನಿನ್ನ ಸೆಳೆವಾರೊ ॥ ೪ ॥ ಮುಟ್ಟಿ ಭಜಿಸಿರೋ
ಹಯವದನನಂಘ್ರಿಯಾ ॥ ಇಷ್ಟು ಪದದ ಮಾರ್ಗವನ್ನು ತೋರಿ ಕೊಡು
ವನಾ ॥ ೫ ॥ ಶ್ರೀ ॥

## ೧೭. ರಾಗ ಪೂರ್ವಿ, ಅಟತಾಳ.

ಏನು ಸುಕೃತವಾ ಮಾಡಿದಳು ಯಶೋದೇ । ಶ್ರೀಸಿಧ ಯಾದವ
ಕೃಷ್ಣನ್ನ ಕರೆದು ಮುದ್ದಿಸುವಳಂತೆ ॥ ಪಲ್ಲ ॥ ಗಂಗಾಜನಕನಿಗೆ ಗಡಿಗೆ
ನೀರೆರೆವಳಂತೆ । ಮಂಗಳಾಂಗನಿಗೆ ಶೃಂಗರಿಸಳಂತೆ ॥ ತುಂಗವಿಕ್ರಮನ
ತೊಟ್ಟಿಲೊಳು ತೂಗುವಳಂತೆ । ಕಂಗಳಿಗಗೋಚರನ ಕರದೆತ್ತಿಕೊಂಬ
ಳಂತೆ ॥ ೧ ॥ ನಗವನೆತ್ತಿದವನಾ ಮಗುವೆಂದೆತ್ತುವಳಂತೆ । ನಿಗಮಗೋ
ಚರನ ಈಕ್ಷಿಸುವಳಂತೆ ॥ ಅಗಣಿತ ಸತ್ವನ್ನ ಹಗ್ಗದಿ ಕಟ್ಟುವಳಂತೆ । ಮಿಗೆ

ನಿತ್ಯತೃಪ್ತಗೆ ಪಾಲೆರೆವಳಂತೇ ॥ ೩ ॥ ಚತುರ್ಮುಖನಯ್ಯನ ಸುತನೆಂದೆತ್ತುವಳಂತೆ । ಶ್ರುತಿನುತಗೆ ಜೋಗುಳ ಪಾಡುವಳಂತೆ ॥ ಶತರವಿತೇಜನಿಗಾರತಿಯನೆತ್ತುವಳಂತೆ ॥ ಗತಭೀತನಿಗೆ ಗೋಪಿ ರಕ್ಷೆಯಿಕ್ಕುವಳಂತೆ ॥ ॥ ೪ ॥ ಬಹುಮುಖನಿಗೆ ಭಾಪು ಮುದ್ದುಕೊಡುವಳಂತೆ । ಅಹಿತಲ್ಪನ ಹಾವು ತುಳಿದನೆಂಬುವಳಂತೆ ॥ ಮಹಾದೈತ್ಯ ದಲ್ಲಣಗೆ ಬಹು ಭಯವ ತೋರುವಳಂತೆ । ಮಹದದ್ಭುತನಿಗೆ ಗುಮ್ಮನೆಂದಂಜಿಸುವಳಂತೆ ॥ ೫ ॥ ಕಡಗೋಲನೇಣನು ಕೈಯಲಿ ಪಿಡಿದನಾ । ಪಡುಗಡಲ ತಡಿಯ ದ್ವಾರಕಿಯೊಂದೂ ॥ ಬಿಡದೆ ನೆಲಸಿದ್ದ ಸಿರಿ ಹಯವದನಮುದ್ದು । ಉಡುಪಿ ಕೃಷ್ಣನ ಉಡಿಯೊಳಿತ್ತುವಳಂತೇ ॥ ೬ ॥ ಶ್ರೀಃ ॥

### ೧೮. ರಾಗ ನಾಟಿ, ಝಂಪೆತಾಳ.

ಅಹುದೋ ಹನುಮಂತ ನೀ । ನಹುದೋ ಬಲವಂತ ನೀ । ನಹುದೋ ಮುಖ್ಯಪ್ರಾಣ ಮೂಲಗುರುವಹುದೋ ॥ ಪಲ್ಲ ॥ ಅಹುದು ಧರೆಯ ಮೇಲೆ ದಿನಕರನ ಪ್ರಭೆಯಂತೆ । ಅಹುದೊ ಮಧ್ವಮತಕೆ ಬಿರುದು ನೀನಹುದೋ ॥ ಅನುಪಲ್ಲ ॥ ಅಂಜನೆಯ ಗರ್ಭದಲಿ ಉದ್ಭವಿಸಿದೆ ನೀನು । ಸಂಜೀವನವ ತಂದು ಕಪಿಗಳನು ಕಾಯ್ದೇ ॥ ಒಂದೇ ನಿಮಿಷದಲಿ ಸಾಗರವ ದಾಟಿದೆ । ಇಂದೀವರಾಕ್ಷಿಗೆ ಉಂಗುರವನಿತ್ತೇ ॥ ೧ ॥ ಕುಂತಿಯಾ ಗರ್ಭದಲಿ ಉದುಭವಿಸಿದೆ ನೀನು । ಪಂಥವನ್ನಾಡಿ ದಾಯಾದ್ಯರೊಡನೆ ॥ ಕಂತುಪಿತನನು ಸೇರಿ ಕೌರವರುಗಳ ತರಿದೆ । ಸಂತೋಷದಿಂದ ಸಾಮ್ರಾಜ್ಯ ಕೈಕೊಂಡೆ ॥ ೨ ॥ ಶುದ್ಧ ಅವತಾರದಲಿ ಮುನಿವೇಷವನೆ ತಾಳಿ । ಅದ್ವೈತವೆಂಬೊ ಅರಣ್ಯವನೆ ಸುಟ್ಟೇ ॥ ಮಧ್ವಮತವನು ಪೇಳಿ ಮತವನುದ್ಧರಿಸಿ । ಮುದ್ದು ಹಯವದನನ ದಾಸ ನೀನಹುದೂ ॥ ೩ ॥ ಶ್ರೀಃ ॥

### ೧೯. ರಾಗ ಸಾವೇರಿ, ಝಂಪೆತಾಳ.

ದಿನಗಳನು ಕಳೆವ ಜನರೇ ಸುಜನರು ॥ ವನಜನಾಭನ ಸದ್ದಾಸರ ಸಮಾಗಮದಿಂದಾ ॥ ಪಲ್ಲ ॥ ಅರುಣೋದಯದೊಳೆದ್ದು ಆಚಮನಕ್ರಮದಿಂದ । ಪರಿಶುದ್ಧರಾಗಿ ಇಹ ಪರಗಳೆಂಬಾ ॥ ಎರಡು ವಿಧ ಸುಖವೀವ

ಗುರು ಮಧ್ವಮುನಿವರನ । ಪರಮ ಮತವಿಡಿದು ಶ್ರೀಹರಿಕಥಾಮೃತ ಸವಿದು ॥ ೧ ॥ ಸ್ನಾನವನು ಮಾಡಿ ಸಂಕಲ್ಪಪೂರ್ವಕದಿ ಸಂ । ಧ್ಯಾನ ಗುರು ಗಾಯತ್ರಿಮಂತ್ರ ಜಪಿಸೀ ॥ ಭಾನುನಾಮಕನಾದ ಪರಮಾತ್ಮನಂಘ್ರಿಯನು । ಧ್ಯಾನವನು ಮಾಡಿ ಅಧ್ಯಯನ ಪಾಠಗಳಿಂದಾ ॥ ೨ ॥ ಶ್ರೀವಾಸುದೇವನಾ ಅಡಿಗಡಿಗೆ ನೆನೆನೆನೆದು। ಪಾವಕದಿ ಪ್ರಾತರಾಹುತಿಯನಿತ್ತು ॥ ಭಾವಜ್ಞರಿಂ ಸಕಲ ಪೌರಾಣಗಳ ಕೇಳೀ । ಹೂವು ಶ್ರೀತುಲಸಿ ವನಮಾಲೆ ಸೇವೆಯ ಮಾಡೀ ॥ ೩ ॥ ನದನದಿಗಳಲಿ ಸ್ನಾನವನು ಮಾಡಿ ಕಂಠದಲಿ। ಪದುಮಾಕ್ಷಿ ಶ್ರೀತುಳಸಿಮಾಲೆಗಳನು ॥ ಮುದದಿಂದ ಧರಿಸಿ ಮಧ್ಯಾಹ್ನಕಾಲದಿ ಗೈವ । ವಿಧಿ ಬ್ರಹ್ಮಯಜ್ಞ ದೇವಋಷಿ ಪಿತೃ ತರ್ಪಣದಿ ॥ ೪ ॥ ಸಾವಧಾನದಿ ತಂತ್ರಸಾರೋಕ್ತ ವಿಧಿಯಿಂದ । ದೇವಪೂಜೆಯ ಮಾಡಿ ದೇವೇಶಗೆ ॥ ನೈವೇದ್ಯವನು ಕೊಟ್ಟು ಸನಕಾದಿಗಳಿಗೊಪ್ಪಿ । ದೇವ ಬಲಿಹರಣ ಬ್ರಾಹ್ಮಣ ಪೂಜೆಯನೆ ಮಾಡೀ ॥ ೫ ॥ ಪರಮ ಸಂತೋಷದಿಂ ದೇವಪ್ರಸಾದವನು । ವರ ಮಾತೃ ಪಿತೃ ಸಹೋದರ ಸಹಿತದಿ ॥ ಪರಮ ಸುಖದ ಪಂಕ್ತಿ ಪಾವನ್ನರೊಡಗೂಡಿ। ನರಹರೀ ಯೆನುತ ಭೋಜನಮಾಡಿ ಮೋದಿಸುತಾ ॥ ೬ ॥ ಸಾಯಮಾನ್ಹ ಸಮಯ ಸಂಧ್ಯಾನ ಗಾಯತ್ರಿ ಜಪ। ಶ್ರೀಯರಸನಂಘ್ರಿಸೇವೆಯನು ಮಾಡೀ॥ ವಾಯುಸಖನೊಳಗಾಹುತಿಯನಿತ್ತು ಲಕ್ಷ್ಮಿನಾ। ರಾಯಣನ ಕಲ್ಯಾಣಗುಣಗಳನು ಪೊಗಳುತಲೀ॥ ೭॥ ತನು ಮನವ ಶ್ರೀಹರಿಯ ಅಧೀನವನೆ ಮಾಡಿ। ಅನುಸರಿಸಿ ಭಾಗ್ಯ ಬಡತನವೆನ್ನದೇ॥ ಮನವರಿತು ಹರಿ ಕೊಟ್ಟಮಾತ್ರವಲ್ಲದೆ ಅಧಿಕ। ಅಣುಮಾತ್ರ ಬರದೆಂದು ಸಂತುಷ್ಟರಾಗುತಲಿ॥ ೮ ॥ ಈವಿಧದಿ ಅನುದಿನವು ಚರಿಸಿ ರಾತ್ರಿಯಲೊಂದು । ಝಾವದಲಿ ತೋಷದಿಂ ನಿದ್ರೆಗೈದೂ । ಝಾವಝಾವದಲೆದ್ದು ನೆರೆಹೊರೆಯು ಕೇಳ್ವಂತೆ। ಪಾವನಚರಿತ್ರ ಹಯವದನನಾ ನೆನೆದೂ ॥ ೯ ॥ ಶ್ರೀಃ ॥

## ೨೦. ರಾಗ ಅಠಾನ, ಅಟತಾಳ.

ಎಂಥ ಪಾವನ ಪಾದವೊ । ಕೃಷ್ಣಯ್ಯನಿ । ನ್ನೆಂಥಾ ಚೆಲುವ ಪಾದವೋ ॥ ಪಲ್ಲ ॥ ಎಂಥ ಪಾವನ ಪಾದವೆಂತು ಜಗದಿ ಕೇಳು ।

ಪಂಥದೊಳಹ ಕುರುಪತಿಯನುರುಳಿಸಿದ ॥ ಅನುಪಲ್ಲ ॥ ಹಲವು ಕಾಲಗ ಳಿಂದಲೀ ಮಾರ್ಗದಿ ॥ ಶಿಲೆಶಾಪವ ಪಡದಿರಲೂ ॥ ಒಲಿದು ರಜವಿ ಪಾವನಗೈದು ಕರುಣದಿಂದ । ಲಲನೆಯ ಮಾಡಿ ಸಲಹಿದ ಶ್ರೀ ಹರಿಯು ॥ ೧ ॥ ಬಲಿಯು ದಾನವನೆ ಬೇಡಿ । ತ್ರೈಲೋಕ್ಯವ । ನಳದು ಏಕಾಂಘ್ರಿಯಲೀ ॥ ಬೆಳೆದು ಭೇದಿಸಲಾಗ ನಳಿನಜಾಂಡವ ಸೋಕಿ । ಚೆಲುವ ಗಂಗೆಯ ಪೆತ್ತ ಜಲಜಾಸನಾರ್ಚಿತ ॥ ೨ ॥ ಚೆಂಡುತರುವ ನೆವದಿ । ಕಾಳಿಂಗನು । ದ್ದಂಡ ಮಡುವ ಧುಮುಕೀ ॥ ಚಂಡಾ ಕಾಳಿಂ ಗನ ಮಂಡೆಯೊಳು ಪಾದ । ಪುಂಡರೀಕವನಿಟ್ಟು ತಾಂಡವನಾಡಿದ ॥ ೩ ॥ ಸಂತತ ಸೌಖ್ಯವೀವಾ । ಕಾವೇರಿಯ । ಅಂತರಂಗದಿ ನೆಲಸೀ ॥ ಸಂತೋಷದಿಂದಲನಂತನ ಮೇಲೆ ನಿಶ್ಚಿಂತೆಯೊಳು ಶ್ರೀಕಾಂತ ಸೇವೆ ಗೊಂಬಾ ॥ ೪ ॥ ಒಲಿದು ಗಯಾಸುರನಾ । ಶಿರದೊಳಿಟ್ಟು । ಹಲವು ಭಕ್ತರ ಪೊರೆದೇ ॥ ನೆಲಸಿ ಉಡುಪಿಲೆನ್ನ ಹೃದಯಕಮಲದಲ್ಲಿ । ತೊಲ ಗದೆ ಇರುತಿಪ್ಪ ಸುಲಭ ಹಯವದನಾ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೨೧. ರಾಗ ಮುಖಾರಿ, ಅಟತಾಳ.

ಬಂದಾನಲ್ಲೇ ಭಾಗ್ಯನಿಧಿ ಬಂದಾನಲ್ಲೇ ಕೃಪಾಸಿಂಧು ॥ ಪಲ್ಲ ॥ ಬಂದಾನಲ್ಲ ರಮಣಿ ನಿನ್ನಾ ಅರಮನೆಗೇ ॥ ಅನುಪಲ್ಲ ॥ ನಂದಗೋಕು ಲದಿ ಪುಟ್ಟಿ ವೃಂದಾವನದೊಳಗಾಡಿ । ಇಂದೀರೆ ರಮಣಾ ಬಂದ ಮಂದರೋದ್ಧಾರ ॥ ಇಂದ್ರಾದಿ ಸುರರಿಗಾನಂದಸುಖವನಿತ್ತು । ಬಂದಾ ಹಯವದನನಾ ಎದುರುಗೊಳ್ಳಿರೀ ॥ ೧ ॥ ಮುತ್ತು ಮಾಣಿಕ್ಯ ನವ ರತ್ನಕಿರೀಟದಿಂದಾ । ಸಪ್ತ ಸೂರ್ಯಮಂಡಲದಿಂದೊಪ್ಪುವನ್ಯಾರೆ ॥ ಕತ್ತಲೆ ನಿವಾರಿಸುವ ಕಸ್ತೂರಿತಿಲಕವನಿಟ್ಟ । ಕೌಸ್ತುಭಧರ ಹಯ ವದನ ದೇವ ಕಾಣಮ್ಮಾ ॥ ೨ ॥ ನೀಲಾದುಡಿಗೆಯನುಟ್ಟು ಕಾಲಿಲಂ ದುಗೆಕಡಗ । ನೀಲಾವರ್ಣ ಶರೀರಬಂದನ್ಯಾರೆ ॥ ಸಾಲು ಸಾಲು ಸಾಲಾದ ಯತಿಗಾಳ ಸಂದಣಿಯಿಂದಾ । ಮೇಲಾಗಿ ಸ್ತುತಿಗೊಂಬ

ಹಯವದನ ಕಾಣವ್ವಾ ॥ ೩ ॥ ಚಿನ್ನ ತುರಗ ಮಿಂಚುತ ರನ್ನ ತೊಡಿಗೆ ಹೊಳೆವುತಾ । ಉನ್ನತ ಗಾಂಭೀರ್ಯದಿ ಬಾಹೋನ್ಯಾರವ್ವಾ ॥ ಕನ್ನೆ ಮಹಾಲಕುಮಿಯು ಮನ ಸೂರೆಗೊಂಡಿಹ । ಚನ್ನಿಗ ಹಯವದನದೇವ ಕಾಣವ್ವಾ ॥ ೪ ॥ ಉರದಲ್ಲಿ ಶ್ರೀವತ್ಸ ಕೊರಳಲ್ಲಿ ಕೌಸ್ತುಭ ಹಾರಾ । ಸರಿ ಹೆಜ್ಜೆಯನಿಡುತಾ । ಬಾಹೋನ್ಯಾರವ್ವಾ ॥ ಗುರು ವಾದಿರಾಜರಿಗೊಲಿದು ಸೋದೆಗೆ ಬಂದು । ಸ್ಥಿರವಾಗಿ ನಿಂತ ಹಯವದನ ಕಾಣವ್ವಾ ॥ ೫ ॥ ಶ್ರೀ ॥

## ೨೨. ರಾಗ ಮಧ್ಯಮಾವತಿ, ತ್ರಿಪುಟತಾಳ.

ಸೇವಕನೆಲೊ ನಾನು । ನಿನ್ನಯ ಪಾದ । ಸೇವೆನೀಡೆಲೋ ನೀನು ॥ ಪಲ್ಲ ॥ ಸೇವಕನೆಲೊ ನಾನು । ಸೇವೆ ನೀಡೆಲೋ ನೀನು । ಕಾವುದೆಮ್ಮನು ಶ್ರೀರಘುವರ । ರಾವಣಾಂತಕ ರಕ್ಷಿಸೆನ್ನನೂ ॥ ಗೋವರ್ಧನ ಧರ ದೇವ । ಗೋವೃಗಳ । ಕಾವ ಮಹಾನುಭಾವ ॥ ವರಗಳನೀವ ದೇವ । ಶ್ರೀವಲ್ಲಭ ದಯಮಾಡೆನ್ನೊಳು । ಈವೇಳೆಗೆ ಇಂದಿರೆರಮಣಾ ॥ ॥ ಅನುಪಲ್ಲ ॥ ರಾಮ ದಶರಥನಂದನ । ರಘುಕುಲಾಂಬುಧಿ । ಸೋಮ ಸುಂದರವದನ ॥ ವಾಮನ ಪರಿಪೂರ್ಣ । ಕಾಮ ಕೌಸಲ್ಯರಾಮಾ । ಸ್ವಾಮಿ ಶ್ರೀರಂಗಧಾಮ ದೈತ್ಯವಿ । ರಾಮ ಶ್ರೀಮದಾನಂತ ನಾಮಾ ॥ ಭೀಮಾ । ಮುನಿಜನ ಸ್ತೋಮ । ರಮ್ಯಗುಣಧಾಮ । ರಣರಂಗ ಭೀಮಾ । ಕೋಮಲಶ್ಯಾಮ ಹೇ ॥ ಸಾಮಜವರಗನೇ ನೀನನುದಿನ । ಕಾಮಿತಫಲ ಕರುಣಿಸಿ ಕಾಯೋ ॥ ೧ ॥ ಶಂಕರಾಸುರಸೇವಿತ । ಶೇಷ ಗರುಡ । ಲಂಕಾರ ಮುನಿಶೋಭಿತಾ ॥ ಪಂಕಜನಯನ ವಿಭಾ । ನಾಂಕ ಜನಕ ಪಾದ । ಪಂಕಜಾಸನವಿನುತ ತಿರುಪತಿ । ವೆಂಕಟಗಿರಿಯದಂಕ ಜಯ ಜಯ ॥ ಶಂಖ । ಚಕ್ರಗದೆ ಪಂಕ । ಜಧರ ಅಕಳಂಕ । ಚರಿತ ಪಟಂಕಾ । ಗೊಲಿದ ನಿಶ್ಶಂಕನೇ ॥ ಲಂಕಾಧಿಪ ರಿಪುರಘುಪತಿ ನಿನ । ಕಿಂಕರರಿಗೆ ಕಿಂಕರನು ನಾನು ॥ ೨ ॥ ಮಂದರೋದ್ಧರ ಮಾಧವ । ಮಧುಸೂದನ । ನಂದ ಸುಂದರವಿಗ್ರಹ ॥ ಬಿಂದುಮಾಧವ ಶ್ರೀಮ । ಕುಂದ ಶ್ರೀಮದಾನಂದ । ವಂದಿತಾಮರವೃಂದ ವೇದವ । ತಂದ ತುರಗವನೇರಿ

ಬಂದ ॥ ವೃಂದಾವನದೊಳಗಿಂದ । ಯಶೋದೆಯ ಕಂದ । ಹರಿ ಗೋವಿಂದ । ಶೇಷಗಿರಿಯಲಿ ನಿಂದ । ಮಂದಾಕಿನಿ ಪಡದನೇ ಧ್ರುವಗೊಲಿ । ವಂದದಿ ಯೆನಗೊಲಿಯೊ ಹಯವದನ ॥ ೩ ॥ ಶ್ರೀಕ ॥

೨೩. ರಾಗ ಸೂಂಜಿ, ಅಟತಾಳ.

ಎನ್ನಷ್ಟು ಕಂದನೇ ಚಿಣ್ಣ ಗೋಪೇರು ಬಂದು । ನಿನ್ನನು ದೂರು ವರೋ ಕಿಟ್ಟಯ್ಯಾ ॥ ಕನ್ನೇರು ಕೊಟ್ಟಿಂದ ಅನ್ಯಾಯ ನುಡಿತಾರೆ । ಇನ್ನೇನು ಮಾಡಲಮ್ಮಾ ಗೋಪೆಮ್ಮಾ ॥ ಪಲ್ಲ ॥ ಗೋಪೇರ ಮನೆಗಳ ಪೊಕ್ಕು ಬಹುಪರಿ । ತಾಪವಮಾಡುವರೇ ಕಂದಾ ಗೋವಿಂದ ॥ ಕಾಪಟ್ಯ ಸತಿಯರ ಮಾತು ನೀ ಲಾಲಿಸಿ । ಕೋಪಿಸಬೇಡವಮ್ಮಾ ಗೋಪೆಮ್ಮಾ ॥ ೧ ॥ ದಧಿದುಗ್ಧ ಭಾಂಡವೊಡೆದು ಗೋಪಿಯರನ್ನ । ಸದರ ಮಾಡುವರೇ ಕಂದಾ ಗೋವಿಂದಾ ॥ ಉದಯದಿ ಗುದ್ದಾಡಿ ಮಾಜಾರ್ಲಂಗಳು ಬೀಳೆ । ದಧಿಭಾಂಡ ಒಡೆದವಮ್ಮಾ ಗೋಪೆಮ್ಮಾ ॥ ೨ ॥ ಅಣ್ಣಯ್ಯ ಬಲರಾಮ ನಿನ್ನ ಬಿನ್ನಣ ಸುದ್ದಿ । ಚೆನ್ನಾಗಿ ಹೇಳಿದನೋ ಗೋವಿಂದ ॥ ಉನ್ನತ ದಾಯಾದಿ ಮಾತುಕೇಳಿ ನೀನು । ಕೋಪಿಸಬೇಡವಮ್ಮಾ ಗೋಪೆಮ್ಮಾ ॥ ೩ ॥ ಬಸವನ ಆಟದಿ ಪಶುಶಿಶುಗಳ ಕೂಡಿ । ಮಸಿಮಣ್ಣು ಮೈಯ್ಯಾದವೋ ಗೋವಿಂದ ॥ ಬಿಸಜಾಕ್ಷಿಯರು ತಮ್ಮ ಮನೆ ಕೆಲಸದ ಕೈಯ್ಯ । ಮಸಿಮಣ್ಣು ವರಸಿದರೇ ಗೋಪೆಮ್ಮಾ ॥ ೪ ॥ ಒರಗಿದ್ದ ಹಸುಗಳೆಬ್ಬಿಸಿ ಕರುಗಳ ಬಿಟ್ಟು । ದುರುಳತನವ ಮಾಡೋರೆ ಗೋವಿಂದ ॥ ನೆರೆದಿದ್ದ ಶಿಶುಗಳಾಡುವ ಗುಲ್ಲು ತಾವ್ ಕೇಳಿ । ಕರುಶಿಶು ಬೆದರಿತಮ್ಮಾ ಗೋಪೆಮ್ಮಾ ॥ ೫ ॥ ಬಾ ಯೆನ್ನ ಚಿನ್ನವೆ ಬಾ ಯೆನ್ನ ರನ್ನವೆ । ಬಾಯೆನ್ನ ಮೋಹದ ಗಿಣಿಯೇ ಗೋವಿಂದ ॥ ಬಾ ಯೆಂದು ಯಶೋದೆ ಬಿಗಿದಪ್ಪಿ ಮುದ್ದಾಡ್ದ । ಬಾರೋ ಹಯವದನಾ ॥ ೬ ॥

೨೪. ರಾಗ ಕಲ್ಯಾಣಿ, ತ್ರಿಪುಟತಾಳ.

ಬಿಡೆನೊ ಬಿಡೆನೊ ನಿನ್ನ ಚರಣಕಮಲವಾ । ಎನ್ನ ಹೃದಯಮಧ್ಯದೊಳಿಟ್ಟು ಭಜಿಸುವೆ ಅನುದಿನಾ ॥ ಪಲ್ಲ ॥ ಬಲಿಯ ದಾನವ ಬೇಡಿ

ಇಳೆಯು ಬ್ರಹ್ಮಾಂಡವ । ಪದುಮನಾಭ ನಿನ್ನ ಪಾದ ತೊಳೆವೆ ॥ ಉಗುರು ಕೊನೆಯಿಂದಾ ಉದಿಸಿದಳಾ ಗಂಗೆ । ಹರಿಪಾದ ತೀರ್ಥವೆಂದು ಹರ ಧರಿಸಿದನಾಗ ॥ ೧ ॥ ಆ ಸತಿ ಶಾಪದಿ ಅಹಲ್ಯೆ ಸಾವಿರಯುಗ । ಪಾಷಾಣವಾಗಿ ಪಥದೊಳಿರಲು ॥ ಲೋಕ ನಿನ್ನ ಪಾದ ಸೋಂಕಿದಾಗಲೆ । ಆ ಸತಿ ಪಡವಳು ದಿವ್ಯ ದೇಹವನೂ ॥ ೨ ॥ ವಜ್ರಾಂಕುಶಧ್ವಜ ಪದುಮ ರೇಖೆಗಳಿಂದ । ಒಪ್ಪಿಸಿರಿ ಪದಪದುಮವನು ॥ ಭಕ್ತಿಯಿಂದ ಭಜಿಸಲು ಸಿರಿಹಯವದನನೆ । ಪ್ರತ್ಯಕ್ಷವಾಗಿ ಸಲಹುವ ನಮ್ಮನೂ ॥ ೩ ॥

೨೫. ರಾಗ ಪೂರ್ವಿ, ತ್ರಿಪುಟತಾಳ.

ಒಂದು ಬಾರಿ ಸ್ಮರಣೆ ಸಾಲದೆ । ಶ್ರೀಮಧ್ವರಾಯರ । ಒಂದು ಬಾರಿ ಸ್ಮರಣೆ ಸಾಲದೇ ॥ ಪಲ್ಲ ॥ ಹಿಂದನೇಕ ಜನ್ಮಗಳಲಿ । ಬಂದು ನಾನಾ ಯೋನಿಗಳಲಿ ॥ ಇಂದಿರೇಶನ ಪಾದಕಮಲ । ಹೊಂದಬೇಕೆಂಬುವರಿಗೆ ॥ ೧ ॥ ಪ್ರಕೃತಿಬಂಧನದಿ ಸಿಲುಕಿ । ಸಕಲ ವಿಷಯಗಳನೆ ಜರೆದು ॥ ಅಖಿಲರೊಡೆಯನಾದ ಹರಿಯ । ಭಕುತಿಯು ಬೇಕೆಂಬುವರಿಗೆ ॥ ॥ ೨ ॥ ಆರು ಮಂದಿ ವೈರಿಗಳನು । ಸೇರಲರಿಯದಂತೆ ಜರೆದು ॥ ಧೀರನಾಗಿ ಹರಿಯ ಪದವ । ಸೇರಲುಬೇಕೆಂಬುವರಿಗೆ ॥ ೩ ॥ ಘೋರ ಸಂಸಾರವೆಂಬ । ವಾರಿಧಿಗೆ ಜ್ಞಾನ ಓಡೆ ॥ ಏರಿ ಮೆಲ್ಲನೆ ಹರಿಪುರವ । ಸೇರಲುಬೇಕೆಂಬುವರಿಗೆ ॥ ೪ ॥ ಕ್ರೂರ ಬುದ್ಧಿಯು ತನಗೆ ಗಂ । ಭೀರ ಶ್ರೀಹಯವದನನ್ನ ॥ ಸೇರಿ ಬದುಕಲರಿಯದಿರಲು । ತೋರಿ ಕೊಟ್ಟ ಮಧ್ವಮುನಿಯ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೨೬. ರಾಗ ಯದುಕುಲಕಾಂಬೋಧಿ, ಆದಿತಾಳ.

ಸಾರಿದೆನೊ ನಿನ್ನಾ ವೆಂಕಟಾರನ್ನಾ ॥ ಪಲ್ಲ ॥ ನೀರಜನಯನ ನಿರ್ಮಲಗುಣಪೂರ್ಣ ॥ ಅನುಪಲ್ಲ ॥ ಯೆನ್ನಾ ಕುಂದುಗಳನ್ನಾ ಎಣಿಸಾಲಾಗದೊ ದೇವಾ । ಪನ್ನಗಾದ್ರಿವಾಸಾ ನೀನೇ ನಿರ್ದೋಷಾ ॥ ೧ ॥ ಅನಾಥನು ನಾನು ಯೆನಗೇ ಬಾಂಧವ ನೀನು । ನಿನ್ನಾವನೆಂದು

ನೋಡೋ ನೀನಾಗಿ ದಯವಮಾಡೋ ॥ ೨ ॥ ದೇಶದೇಶದವರ ಪೊರೆವಂತೆ ಪೊರೆಯೆನ್ನ | ಶೇಷಾಚಲಘನ್ನ ಶ್ರೀಶಾ ಶ್ರೀಹಯವದನಾ ॥ ೩ ॥

೨೭. ರಾಗ ನಾಟಿ, ಝಂಪೆತಾಳ.

ಜಯ ಜಯತು ಶುಭಕಾಯ | ಜಯ ಜಯತು ಹರಿ ಪ್ರಿಯ ॥ ಜಯ ಜಯತು ಜೀಯಾ | ಜಯ ಮಧ್ವಮುನಿರಾಯಾ ॥ ಪಲ್ಲ ॥ ರಾಮಾವತಾರದಲಿ ಹನುಮಂತನಾಗಿ ನೀ | ಆಮಹಾ ಪುರವ ಅನಲಗಾಹುತಿಯನಿತ್ತೆ ॥ ಭೂಮಿಜೆಯ ಕುಶಲವನು ರಘುನಾಥಗರುಹಿದೇ | ಸ್ವಾಮಿಕಾರ್ಯವ ವಹಿಸಿ ಖಳರ ನೀ ಮುರಿದೇ ॥ ೧ ॥ ದ್ವಾಪರಾಂತದಲಿ ಶ್ರೀಕೃಷ್ಣನಂಘ್ರಿಯ ಭಜಿಸಿ | ಪಾಪಿ ಮಾಗಧ ಬಕಕೀಚಕಾದಿಗಳನೂ ॥ ಕೋಪದಿಂದಲೆ ಮುರಿದು ಕುರುಕುಲವ ಗೆಲಿದೆ ಪ್ರ | ತಾಪದಿಂದಲಿ ಮೆರೆದು ಖಳರ ನೀ ತರಿದೇ ॥ ೨ ॥ ದುರುಳ ವಾದಿಗಳಿಗುತ್ತರವ ಕೊಡಬೇಕೆಂದು | ಪರಮ ಶ್ರುತಿಸ್ಮೃತಿವಾಕ್ಯಗಳ ಕ್ರೋಡಿಸೀ ॥ ಉರುತರದ ಗ್ರಂಥಗಳ ರಚಿಸಿ ಶಿಷ್ಯರಿಗೊರೆದ | ಪರಮಾಂತಃಕರುಣಿಯೆ ಗುರುಶಿರೋಮಣಿಯೇ ॥ ೩ ॥ ಮಾಯಿಗಳು ಹೆಚ್ಚಿ ಮತವೆಲ್ಲ ಸಂಕರವಾಗಿ | ತಾಯ್ಗಳಿಲ್ಲದ ಶಿಶುಗಳಂತಿರಲು ಸುಜನರೂ | ನೀಯವತರಿಸಿ ಮುನಿಯೆನಿಸಿ ಮೂಜಗಕೆ ನಾ | ರಾಯಣನೇ ಪರದೈವವೆಂದು ಸ್ಥಾಪಿಸಿದೇ ॥ ೪ ॥ ನಿನ್ನ ಮತವೇ ವೇದಶಾಸ್ತ್ರಗಳ ಸಮ್ಮತವು | ನಿನ್ನ ಮತವೇ ಇಹಪರಕೆ ಸಾಧನವು ॥ ಪನ್ನಂಗಶಾಯಿ ಹಯವದನನ ನಿಜಭಕ್ತ | ನಿನ್ನ ಪೋಲುವರುಂಟೆ ಮಧ್ವಮುನಿರಾಯಾ ॥ ೫ ॥ ಶ್ರೀಃ ॥

೨೮. ರಾಗ ನಾಟಿ, ಝಂಪೆತಾಳ.

ಎಣೆ ಯಾರೊ ನಿನಗೆ ಹನುಮಂತರಾಯಾ ॥ ಪಲ್ಲ ॥ ಎಣೆ ಯಾರು ನಿನಗೆ ತ್ರಿಭುವನದೊಳಗೆಲ್ಲ | ಪ್ರಣತಜನಮಂದಾರ ಪವನ ಸುಕುಮಾರಾ ॥ ಅನುಪಲ್ಲ ॥ ಅಡಿಗಡಿಗೆ ರಾಮರ ಪಾದಾಂಬುಜಕೆ ವಂದಿಸುತ | ನಡ ನಡೆದು ಮುದ್ರಿಕೆಯ ಕೊಂಡು ಮುದದಿ ॥ ಧಡ ಧಡನೆ

ಅಂಬುಧಿಯಾ ದಾಟಿ ಸೀತೆಗೆ ಗುರುತಾ । ಕೊಡ ಕೊಡುತ್ತ ಕುಸ್ತರಿಸಿ ದಂತ ಹನುಮಂತಾ ॥ ೧ ॥ ಗರ ಗರನೆ ಹಲ್ಗಿರಿದು ಕಲುಷ ದೈತ್ಯರನೆಲ್ಲ । ಚರ ಚರನೆ ಸೀಳಿ ಸಂಭ್ರಮದಿಂದಲೀ ॥ ಬಿರ ಬಿರನೆ ಕಣ್ಬಿಡುತ ಬಿಂಕದಲಿ ಲಂಕೆಯನು । ಸುರ ಸುರನೆ ಬಾಲದಲಿ ಸುಟ್ಟು ರಣಧಿಟ್ಟ ॥ ೨ ॥ ಫಳ ಫಳನೆ ಆರ್ಭಟಿಸಿ ಭಾಪುರೇ ರಾವಣನ । ಬೆಳೆ ಬೆಳೆದ ನಂದನವನವ ಕಿತ್ತಿ ॥ ಕಳಕಳನೆ ನಗುತ ದಶಕಂಧರನ ಗುದ್ದಿದೆಯೊ । ಬಳಿ ಭಳಿರೇ ಹಯವದನನ ದಾಸ ನಿರ್ದೋಷಾ ॥ ೩ ॥ ಶ್ರೀಃ ॥

## ೨೯. ರಾಗ ಕಾಂಬೋಧಿ, ಝಂಪೆತಾಳ.

ಈತನೇ ಲೋಕಗುರು ವೇದವಿಖ್ಯಾತಾ ॥ ಪಲ್ಲ ॥ ಭೂತಳದಿ ಶ್ರೀರಾಮದೂತನೆಂಬಾತಾ ॥ ಅನುಪಲ್ಲ ॥ ಅಂದು ಹನುಮಂತನಾಗಿ ಅಖಿಳದಿಕ್ಕೆಲ್ಲವನು । ಒಂದು ನಿಮಿಷದಿ ದಾಟಿ ಉದಧಿಲಂಘಿಸಿದಾ ॥ ಇಂದೀವರಾಕ್ಷಿಯಾ ಕಂಡು ಮುದ್ರಿಕೆ ಕೊಟ್ಟು । ಬಂದು ರಾಮರ ಪಾದಕೆರಗಿ ನಿಂದಾತಾ ॥ ೧ ॥ ಅರ್ಜುನಗೆ ಅಣ್ಣನಾಗಿ ಅಂದು ದುರ್ಯೋಧನನ । ಲಜ್ಜೆಯನು ಕೆಡಿಸಿ ಷಡ್ರಥಿಕರನು ಗೆಲಿದಾ ॥ ಮುಜ್ಜಗವು ಭಾದಿಸಾ ಮಗಧರಾಯನ ಶೀಳ್ದ । ಸಜ್ಜನರಪ್ರಿಯ ಭೀಮಸೇನನೆಂಬಾತಾ ॥ ೨ ॥ ಮೂರಾರು ಯೆರಡೊಂದು ಮೂಢಮತಗಳ ಮುರಿದು । ಸಾರ ಮಧ್ವಶಾಸ್ತ್ರ ಸಜ್ಜನರಿಗೊರೆದೂ ॥ ಊರ್ವಿಯೊಳು ಹಯವದನನ ಪೂರ್ಣ ಸೇವಕನಾದ । ಧೀರ ಮಧ್ವಾಚಾರ್ಯ ಲೋಕದೊಳು ಮೆರೆದಾ ॥ ೩ ॥

## ೩೦. ರಾಗ ಆನಂದಭೈರವಿ, ಆದಿತಾಳ.

ಬೇಗ ಬಾರೋ ಬೇಗ ಬಾರೋ ನೀಲಮೇಘವರ್ಣ ॥ ಪಲ್ಲ ॥ ಬಾರೋ ಬೇಗ ಬಾರೋ ವರ ಬೇಲಾಪುರದ ಚನ್ನಾ ॥ ಅನುಪಲ್ಲ ॥ ಇಂದಿರಾರಮಣ ಗೋವಿಂದಾ ಬೇಗ ಬಾರೋ ॥ ನಂದನ ಕಂದಾ ಮುಕುಂದಾ ಬೇಗ ಬಾರೋ ॥ ೧ ॥ ಯುದ್ಧಾ ಅನಿರುದ್ಧಾ ನಿರವದ್ಯಾ ಬೇಗ ಬಾರೋ ॥ ಹದ್ದಾನೇರಿದ್ದ ಸುಪ್ರಸಿದ್ಧಾ ಬೇಗ ಬಾರೋ ॥ ೨ ॥ ರಂಗಾ ಉತ್ತುಂಗಾ ನರಸಿಂಗಾ ಬೇಗ ಬಾರೋ ॥ ಮಂಗಳಾಮಹಿಮಾ

ಶುಭಾಂಗಾ ಬೇಗ ಬಾರೋ ॥ ೩ ॥ ಧೀರಾ ಉದಾರಾ ಗಂಭೀರಾ ಬೇಗ ಬಾರೋ ॥ ಹಾರಾಲಂಕಾರಾ ರಘುವೀರಾ ಬೇಗ ಬಾರೋ ॥ ೪ ॥ ಅಯ್ಯಾ ವಿಜಯ್ಯಾ ಸಾಹಯ್ಯಾ ಬೇಗ ಬಾರೋ ॥ ಅಹ್ಯಾದ್ರಿವಾಸಾ ಹಯವದನಾ ಬೇಗ ಬಾರೋ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೩೧. ರಾಗ ಶಂಕರಾಭರಣ, ಝಾಪುತಾಳ.

ಏನಾ ಬಣ್ಣಿಪೆನಮ್ಮಮ್ಮ । ಏನಾ ಬಣ್ಣಿಪೆ ಪೂರ್ಣಪ್ರಜ್ಞಪಂಡಿತ ರಾಯರಾ ॥ ಪಲ್ಲ ॥ ಮಧ್ವಸರೋವರದ ತೀರದ । ಮುದ್ದು ಕೃಷ್ಣನ ಪ್ರ । ಸಿದ್ಧಿಯಿಂದ ಪೂಜೆಮಾಡಿ । ಗೆದ್ದ ಬಲವಂತರಾಯರಾ ॥ ೧ ॥ ಬಹ್ವ ಬದ್ಧ ಮಾಯಿಗಳ ಕಾಲಿ । ಲೊದ್ದು ಮೂಲೆಗೆ ಹಾಕಿ ॥ ಮಧ್ವಶಾಸ್ತ್ರ ವೆಲ್ಲಾ ಪ್ರ । ಸಿದ್ಧ ಮಾಡಿದಾ ಯತಿರಾಯರಾ ॥ ೨ ॥ ಸಿರಿ ಹಯವದನನ । ಚರಣಕಮಲವನು ॥ ನಿರುತವಾಗಿ ಸೇವಿಸುವಾ । ಪರಮಾಪ್ತನಾ ನಿಜ ದಾಸರಾ ॥ ೩ ॥ ಶ್ರೀಃ ॥

### ೩೨. ರಾಗ ಸೌರಾಷ್ಟ್ರ, ಝಾಪುತಾಳ.

ಮುಂದೂ ಹಿಂದೂ ಯೆಂದೆಂದೀಗು ಗೋವಿಂದ ಎನಗೆ ಬಂಧೂ ॥ ಪಲ್ಲ ॥ ಮನೆಯೆಂಬೊದೆ ಸುಮ್ಮನೆ ಮಕ್ಕಳೆಂಬೊದೆ ದಂಧನೆ । ಹಣವೆಂಬೊದೆ ಬಲು ಬೇನೆ ಹಾರಿಹೋಗುವದು ತಾನೆ ॥ ೧ ॥ ಮಂದಗಮನೆಯರ ಕೂಡಿ ಮದವೆಲ್ಲಾ ಹೋಗಲಾಡಿ ॥ ಮುಂದೆ ತೋರದಂತೆ ಬಾಡಿ ಮೋಸ ಹೋಗಲುಬೇಡಿ ॥ ೨ ॥ ಪರಸತಿ ಪರಧನವಾಸೆ ಪರಕ್ಕೆ ಬಾರದಿದು ಘಾಸೆ ॥ ಸಿರಿ ಹಯವದನನ ಚರಣ ಭಜಿಸಿ ಪಡೆಯಿರೋ ಕರುಣ ॥ ೩ ॥ ಶ್ರೀಃ ॥

### ೩೩. ರಾಗ ಸಾವೇರಿ, ಝಾಪುತಾಳ.

ಹನುಮಂತ ನೀ ಬಲು ಜಯವಂತನಯ್ಯಾ ॥ ಪಲ್ಲ ॥ ಅನುಮಾನವಿಲ್ಲದಾನಂದತೀರ್ಥಾಚಾರ್ಯಾ ॥ ಅನುಪಲ್ಲ ॥ ರಾಮ ಸೇವಕ

ನಾಗಿ ರಾವಣನ ಪುರವ ನಿ । ರ್ಧೂಮ ಮಾಡಿದ್ಯೋ ನಿಂದು ನಿಮಿಷ ದೊಳಗೆ॥ ಭೂಮಿಪುತ್ರಿಗೆ ಮುದ್ರೆಉಂಗುರವನಿತ್ತು ನೀ । ಪ್ರೇಮಕುಶಲವ ರಾಮಪಾದಕರ್ಪಿಸಿದೇ ॥ ೧ ॥ ಕೃಷ್ಣಾವತಾರದಲಿ ಭೀಮನಾಗ್ಯವತರಿಸಿ । ದುಷ್ಟ ದೈತ್ಯರನೆಲ್ಲ ಸಂಹರಿಸಿದೇ ॥ ದೃಷ್ಟಿಹೀನನಾದ ಧೃತರಾಷ್ಟ್ರನೊಂಶ ವ ನೀನು । ಕಷ್ಟವಿಲ್ಲದೆ ಕೊಂದು ಶ್ರೀಕೃಷ್ಣಗರ್ಪಿಸಿದೇ ॥ ೨ ॥ ಪತಿತ ಸಂ ಕರ ಪುಟ್ಟಿ ಮತವೆಲ್ಲ ಕೆಡಿಸಲು । ಮತಿಹೀನರಾಗೆ ಸಜ್ಜನಗಳೆಲ್ಲಾ ॥ ಅತಿವೇಗದಲಿ ಮಧ್ವಯತಿಯಾಗಿ ಅವತರಿಸಿ । ಗತಿಯ ತೋರಿಸಿದೆ ಹಯವದನನ ನಿಜದಾಸಾ ॥ ೩ ॥ ಶ್ರೀಃ ॥

### ೩೪. ರಾಗ ನಾಟಿ, ಝಂಪೆತಾಳ.

ಜಯ ಭೀಮಸೇನಾ । ಜಯ ಭೀಮಸೇನ ದುರ್ಜನತಿಮಿರಮಾರ್ತಾಂಡ॥ ಪಲ್ಲ ॥ ಜಯ ಶಾಂತ ಉದ್ದಂಡ ಕದನಪ್ರಚಂಡಾ ॥ ಅನುಪಲ್ಲ ॥ ಕಿಮ್ಮೀರ ಬಕ ಹಿಡಿಂಬಕ ಕೀಚಕಧ್ವಂಸ ॥ ದುರ್ಮದ ಭಾರತನೃಪವನಚ್ಛೇದೋತ್ತಂಸ ॥ ೧ ॥ ಅನುಜ ಸೇನಾಸಹಿತ ಕಲಿ ಧಾರ್ತರಾಷ್ಟ್ರನ್ನ । ದನುಜ ಗಜಪಂಚಾಸ್ಯನೆಂದೆನಿಸಿದ ಘನ್ನ ॥ ೨ ॥ ದ್ರೌಪದೀಪ್ರಿಯ ಸಕಲವಿದ್ಯಪ್ರದೀಪಾ ॥ ಪಾಪಹರ ಹಯವದನ ಪದಕಂಜಮಧುಪಾ ॥ ೩ ॥

### ೩೫. ರಾಗ ಶಂಕರಾಭರಣ, ಅಟತಾಳ.

ಇಂದಿರೆಯುರಸ ಚಂದ್ರಮಂಡಲ । ಮಂದಿರಾಖಿಳವಂದ್ಯ ಹಯಮುಖ ॥ ಎಂದೆಂದೆನ್ನ ಮನದಿಂದಗಲದಿರು । ಮಂದರಾದ್ರಿಧರಾ ॥ ಪಲ್ಲ ॥ ತುಂಗ ಮಹಿಮ ತುರಂಗವದನ ಶು । ಭಾಂಗ ರಿಪುಕುಲಭಂಗ ಸುಜನರ । ಸಂಗ ಯೆನ್ನಂತರಂಗ ಮಲಿನವು । ಹಿಂಗಿಸುವದೆಂತೋ ॥ ಮಂಗಳಾಬ್ಧಿತರಂಗದುಬ್ಬಿಗೆ । ತಿಂಗಳೆನಿಸುವ ರಂಗ ನಿನ ಪಾ । ದಂಗಳಾಬ್ಜಕಂಗಜನ ತಂದೆ । ಭೃಂಗನೆಂದೆಣಿಸೋ ॥ ೧ ॥ ವಾರಿಜಾಕ್ಷ ಮುರಾರಿ ಮದವೆಂಬೊ । ಮಾರಿಮುಸುಕಿಟ್ಟು ಸಾರೆ ಮತ್ಸರ । ಮಾರನೊಡಗೂಡಿ ದಾರಿ ತಪ್ಪಿಸಿ । ಗಾರು ಮಾಡಿತೆನ್ನಾ । ವೈರಿಕ್ರೋಧ ಮಹೋರಗದ ವಿಷ । ಧಾರಿ ಲೋಭಹಂಕಾರಗಳನು ನಿ । ವಾರಿಸಿ ನಿನ ಚಾರು ಚರ

ಣವ । ತೋರಿ ಸಲಹೊ ಯೆನ್ನಾ ॥ ೨ ॥ ಧನ್ಯ ಸುರರ ಜೀವನ್ನ ಕರುಣಾಸಂ । ಪನ್ನ ನಿತ್ಯ ಪ್ರಸನ್ನ ಚಿನುಮಯ । ಪನ್ನಗಾರಿವಾಹನ್ನ ಶಶಿಸಮ । ವರ್ಣ ಪುರುಷಘನ್ನಾ ॥ ನಿನ್ನ ಪಾದ ಪಾವನ್ನ ಸುರತರು । ಎನ್ನ ನೆರಳಲಿಟ್ಟೆನ್ನ ಸಲಹೋ ಮ । ತ್ತನ್ಯಥಾ ಗತಿಶೂನ್ಯ ನಾನು ಸಂ । ಪೂರ್ಣ ಹಯವದನಾ ॥ ೩ ॥ ಶ್ರೀಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥

### ೩೬. ರಾಗ ಕಾಂಬೋಧಿ, ಅಟತಾಳ.

ನೀ ಕಾಯೊ ಯೆನ್ನ ಯೆನಗೆ ನೀ ಬಂಧು ಯೆಂದೆಂದೂ ದಯಾ ಸಿಂಧೂ ॥ ಪಲ್ಲ ॥ ತಮನ ಕೊಂದೆ ಶ್ರುತಿತತಿಯ ನೀ ತಂದೆ ॥ ಕೂರ್ಮನಾಗಿ ಗಿರಿಯನೆತ್ತಿದೇ ॥ ಕ್ಷಮೆಯ ಪೊತ್ತೆ ಹಿರಣ್ಯಕನ ಕಿತ್ತೆ ತ್ರಿವಿ । ಕ್ರಮನಾಗಿ ಬೆಳದೆ ತ್ರೈಲೋಕ್ಯವನಳದೆ ॥ ೧ ॥ ರಾಯರಾಯರ ಗೆಲಿದೆ ರಾವಣ ಬಲವನು ಮುರಿದೆ । ಮಾಯದಿ ಗೋವಳನಾದೇ ॥ ಸ್ತ್ರೀಯರ ಕೆಡಿಸಿದೆ ಕಲಿಯಾಗಿ ಕೊಲಿಸಿದೆ । ಕಾಯಜನ ತಾತ ಕಾಮಿತಫಲ ದಾತಾ ॥ ೨ ॥ ಸುರರ ಶಿರೋರನ್ನ ಕರುಣಸಂಪನ್ನ । ಪರುವ ಮಾನವರ ಮಾನ್ಯಾ ॥ ಸಿರಿ ಹಯವದನ್ನ ಪರಮಪಾವನ್ನ । ಪರಿಪೂರ್ಣಶಶಿವರ್ಣ ನಿರುತ ನೀಲ ವರ್ಣಾ ॥ ೩ ॥ ಶ್ರೀಃ ॥

### ೩೭. ರಾಗ ಶಂಕರಾಭರಣ, ಆದಿತಾಳ.

ಲಕ್ಷ್ಮೀನಾರಾಯಣ ಕಾಯೋ ನಿನ್ನ ನಂಬಿದವರ । ಕುಕ್ಷಿಯೊಳು ಜಗಂಗಳನಿತ್ತು ರಕ್ಷಿಸಿದ ಶ್ರೀಶಾ ॥ ಪಲ್ಲ ॥ ಕಂದ ಪ್ರಹ್ಲಾದನ್ನ ಕಾಯ್ದೆ । ಚಂದದಿ ಕಾಯೊ ಯೆಂದು ಬಂದ ॥ ಮುಂದೆ ನಂದ ಮಂದಿಯೊಳು । ನಿಂದು ನೀ ಸಲಹಯ್ಯ ॥ ೧ ॥ ಕರಿರಾಜ ಕರೆಯಲು । ಭರದಿ ಬಂದು ಪೊರೆದೆ ನೀ ॥ ಶರಣಾರಕ್ಷಾಮಣಿಯೇ । ಸಿರಿಯಮ್ಮಗೊಲಿದೆ ನೀ ॥ ೨ ॥ ಶರಣಾಮುಖ್ಯ ಸುರರ । ವರದೈವವಾದೆ ನೀನು ॥ ಶರಣಾರಕ್ಷಾಮಣಿಯೆ । ಸಿರಿಯಮ್ಮಗೊಲಿದೆ ನೀ ॥ ೩ ॥ ಶಂಖಚಕ್ರಧರಾಕಾರ । ಕಿಂಕರಭಯ ಹರ ॥ ಅಂಕದ ಶ್ರೀದೇವಿಗೆ ಏ । ನಾಂಕತಲೆದೋರಿದೆ ನೀ ॥ ೪ ॥ ಹಯ

ವದನನಾಗಿ ನೀ । ತ್ರಯಿರಾಜೋರದನ್ನು ಕೊಂದು ॥ ಸ್ತ್ರೀಯುಣೀಗೆ ನ್ಯಾಯುದಿಂದ । ದಯಾ ಬೀರಿದೆಯುಲ್ಲಾ ॥ ೫ ॥ ಪ್ರೀ ॥

೩೮. ರಾಗ ಮುಖಾರಿ. ಝಂಪೆತಾಳ.

ಯಾಕೆ ವೈಮರದೆ ನೀನೂ ॥ ಪಲ್ಲ ॥ ಯಾಕೆ ವೈಮರದೆ ನೀ ಹಯುವದನ ಪಾದವನು । ಬೇಕೆಂದು ಬಿಡದೆ ಭಜಿಸೋ ನಿನ್ನ । ಕಾಕ ವೈಸನಗಳ ತ್ಯಜಿಸೋ ॥ ಈ ದೇಹ ಸ್ಥಿರವಲ್ಲ ಕಂಡ ಕನಸೋ । ಇನ್ನು ನೀ ಕೇಳದಿರೆ ನಿನ್ನ ಮನಸೋ ॥ ಪ್ರಾಣಿ ॥ ಅನುಪಲ್ಲ ॥ ಪರ ಹೆಣ್ಣಾಗಳ ನೋಡಿ ಪಾಕಿಗಳ ನೀಡಾಡಿ । ಅರಿತೊಂದು ಕಡೆಗೆ ಕರಿವೇ । ಎಲೆ ಮರುಳೆ ಹರುಷದಿಂದವಳ ನೆರೆವೆ । ಅಕಟಕಟ ದುರುಳಜೀವನವೆ ನಿನಗೆ ತರವೇ । ಮತ್ತೊಬ್ಬನಿಗೆ ಕರಕರದು ಪೇಳ್ವೆಯಲ್ಲೊ । ಶಾಸ್ತ್ರಗಳನೊರದೊ ರದು ಕೇಳ್ವೆಯಲ್ಲೋ । ನೀ ಹೋಗಿ ನರಕದಲಿ ಬೀಳ್ವೆಯಲ್ಲೋ ॥ ಪ್ರಾಣಿ ॥ ॥ ೧ ॥ ಧನವ ಕೂಡಿಸಿಕೊಂಡು ದಾನಧರ್ಮವ ಮಾಡ । ದಿನಗಾರು ನಾಟಿ ಯೆಂಬೇ । ನೀನಿಷ್ಟಜನರ ಬಿಟ್ಟೊಬ್ಬನುಂಬೇ । ಎಲೊ ಎಲೋ ಮುನಿದು ಸಕಲರ ಮುನಿಯುಗೊಂಬೇ । ಆಧನವು ಮನನೆ ಶುದ್ಧಾಗಿಯಿಹುದೇ । ಅದು ಸಾವ ದಿನಕೆ ಸಂಗಡಬಾಹುದೇ । ಕುಬೇರನ ಬಿಟ್ಟು ಕಡೆಗೆ ಹೋ ಹದೇ ॥ ಪ್ರಾಣಿ ॥ ೨ ॥ ಅಳವ ಕೊಳಗದ ಮಾಟ ಆತ ನಿನ್ನೆಡೆಯಾಟ । ನರಕಳಿದ ಬಳಿಕ ನೋಡೋ । ದೇಹ ತಾನುಳಿಯುದಿದು ಹಮ್ಮುಬಿಡೋ । ಇದಕೆ ಹಳವಿಲ್ಲ ನೀ ಮಾತನಾಡೋ । ಮುಂದೆ ಫಳಿಸಿಕೊ ಧರ್ಮಗಳ ವ್ಯರ್ಥ ಕೆಡಬ್ಯಾಡೋ ॥ ದಿನಮಾನಗಳ ಕಳೆಯುದಿರು ನಿತ್ಯವಲ್ಲ । ಇದಕೆ ಉಳಿದರ್ಥಕೆಲಸವಿಲ್ಲ । ನಿನ್ನ ಬಳಿವಿಡಿದು ಬರುವದಲ್ಲ । ಹಿಂದೆ ಉಳಿದ ವರು ಒಬ್ಬರಿಲ್ಲಾ ॥ ಪ್ರಾಣಿ ॥ ೩ ॥ ಕೊಲೆ ದೋಷವೆಂದರಿವೆ । ಕೊಸರಿ ಪೊಬ್ಬನ ಜರಿವೆ । ಇಳೆಯೊಳಗೆ ದಾವನೀತಾ । ಧೂ ನಿನಗೆ ತಿಳಿದುಕೋ ನಿನ್ನ ಮಾತಾ ॥ ವಿಕಳಮತಿಗೊಳಬೇಡ ಒಂದು ಮಾತಾ । ಸೂಚಿಸಲು ಕೊಲೆಗೆ ಗುರಿಯಾದೆ ಕಾಣೋ । ಈಕೋಪ ಹೊಲೆಗೆ ಸರಿಯಲ್ಲವೇನೋ । ನಿನ್ನ ಹುಳುಕುಬುದ್ಧಿಯನು ಮಾಣೋ ॥ ಪ್ರಾಣಿ ॥ ೪ ॥ ಮರದು

ಕಳೆ ಕ್ರೋಧವನು । ಮಾಡದಿರು ಲೋಭವನು । ಗುರು ಹಿರಿಯರಾದವ ರಗೆರಗೋ । ಅನಾಥರಿಗೆ ಚೆನ್ನಾಗಿ ಮರುಗೋ । ಇದೆ ಪರಗತಿಗೆ ಮುಂದೆ ಸೆರಗೋ । ಭಕ್ತರಿಗೆ ಶಿರಿಯರಸ ಹಯವದನನೊಡೆಯಾ । ಲೋಕ ಪರಸಿಂದಕರ ಮುಕ್ತಿಪಡೆಯಾ । ಭಜಿಸಿ ದುರಿತಸಂಕಲೆಯ ಕಡಿಯಾ ॥ ೫ ॥ ಶ್ರೀಃ ॥

೩೯. ರಾಗ ಬಿಲಹರಿ, ಅಟತಾಳ.

ಬಾರಿಯ ತೋರೊ ಗೋಪಾಲಾ । ವಾರಿಜನಾಭ ಶ್ರೀವೈಕುಂಠ ಲೋಲಾ ॥ ಪಲ್ಲ ॥ ಸಿಕ್ಕಿದೆ ಭವಕಾಡಿನೊಳಗೆ । ನಾ । ಲೆಕ್ಕವಿಲ್ಲದ ಜಂತು ಗಳಿಗೆ ॥ ದಿಕ್ಕು ಬೇರ್‍ಯಾರಿಲ್ಲ ಯೆನಗೇ । ಇಂಥಾ । ಕಕ್ಕುಸವನು ಕಳೆದು ಕರುಣಿಸು ಯೆನಗೇ ॥ ೧ ॥ ಗಜರಕ್ಷಕನು ನೀನೆಂದೂ । ದೇವಾ । ಅಜ ರುದ್ರಾದಿಗಳೆಲ್ಲ ಅಂದೂ ॥ ನಿಜವಾಗಿ ಪೊಗಳಿದರಂದೂ । ನಿನ್ನ । ಸುಜ ನರು ಕೇಳಯ್ಯ ನೋಡಿದೆನಿಂದೂ ॥ ೨ ॥ ವರದ ಶ್ರೀಹಯವದನನೆ ಬಾರೈ । ನೀ । ತ್ವರದಿ ನಿನ್ನಯ ಪಾದ ತೋರೈ ॥ ಪರಮ ಕರುಣಾ ಗರಿವರು ನಿನ್ನು ಳಿದು ಬೇರ್‍ಯಾರೈ ॥ ೩ ॥ ಶ್ರೀಃ ॥

೪೦. ರಾಗ ಶಂಕರಾಭರಣ, ಅಟತಾಳ.

ರಾಜಬೀದಿಯೊಳಗಿಂದ । ಕಸ್ತೂರಿರಂಗ । ತೇಜನೇರಿ ಮೆರೆದು ಬಂದ ॥ ಪಲ್ಲ ॥ ಸುತ್ತಮುತ್ತ ಸಾವಿರಾರು ಸಾಲುದೀವಿಗೆ । ಹತ್ತುದಿಕ್ಕಿಲಿ ತುಂಬಾ ಹಗಲುಬತ್ತಿಯೂ ॥ ವಿಸ್ತರಾದಿ ಭೂಸುರಾರು ಸುತ್ತುಗಟ್ಟಿ ನಿಂತಿರಲು । ಮತ್ತೆ ನವೊತ್ಕಳಿಂತು ನಡೆಸುತ್ತ ತೇಜಿಯ ಮೆಲ್ಲನೆ ಜಾಣ ॥ ॥ ೧ ॥ ತಾಳ ಶಂಖ ಭೇರಿಯು ತಂಬೂರಿಯು ಮೊದಲಾದ । ಮೇಲು ಪಂಚಕಂಗಳೆಲ್ಲ ಹೊಗಳುಹೊಗಳಲೂ ॥ ಘಾಳಿಗೋಪುರದ ಮುಂದೆ ಧಾಳಿಯಾಡುವಂತೆ ಸುತ್ತ । ಧೂಳುಗಳನೆಬ್ಬಿಸಿ ವೈಯ್ಯಾಳಿಯಾನಿಗ್ಗುತ್ತ ಜಾಣಾ ॥ ೨ ॥ ಅಚ್ಚನೇಕ ಕಿರುಹೆಸರು ಬೆಳೆಕಾಳು ತೆನೆಗಳು । ಮುಚ್ಚಿ ತಂದ ಕೆನೆ ಮೊಸರು ಪಾಸಾಲು ಬೆಣ್ಣೆಯೂ ॥ ಅಚ್ಚ ತುಪ್ಪ ಪಕ್ವವಾಗಿ ಅತ್ತಿರಸ ಹುಗ್ಗಿಯನ್ನು । ಮೆಚ್ಚಿ ಉಂಡ ಪಾನಕ ನೀರ್ಮಜ್ಜಿಗೆಗಳ

ಸವಿದು ಬೇಗ ॥ ೩ ॥ ಮುತ್ತಿನಾ ತುರಾಯಿ ಅಂಗಿ ಮುಂಡಾಸು ತತ್ಥಳಿಪ ತಾಳಿವಜ್ರ ತಾಳಿಚೌಕುಲಿ ॥ ಮುತ್ತಿನ ಕುಂಡಲವಿಟ್ಟು ಮೋಹಿಸುತ್ತ ಬೀದಿಯಲ್ಲಿ । ಕತ್ತಿಯಾನುಡಿಯೊಳು ಸಿಕ್ಕಿ ಕೈಯಲಿ ನೀರಾಜಿಯ ಪಿಡಿದು ॥ ೪ ॥ ರಂಭೆಯು ಮೊದಲಾದ ದೇವರಮಣಿಯರು । ಕುಂಭದಾರತಿಯ ಪಿಡಿದು ಕೂಡ ಪಾಡಲೂ ॥ ಶಂಭುಮುಖ್ಯನಿರ್ಜರರೆಲ್ಲ ಸ್ವಾಮಿ ಪರಾಕೆಂದೆನುತ್ತ । ಅಂಬುಧಿಭವಾಗ್ನಿಗಳ ಆಳಿದಾ ಶ್ರೀರಂಗನಾಧ ॥ ೫ ॥ ವೇದಶಾಸ್ತ್ರದಿಂದ ವಿಪ್ರರು ವಂದಿಸಿ ಪೊಗಳಲು । ಮೋದದಿಂದ ಗಾಯಕರು ಮರೌರಿ ಪಾಡಲು ॥ ಹಾದಿಬೀದಿಯಲ್ಲಿ ನಿಂತು ಭಾಸುರಜಾಣರೀಗೆಲ್ಲ । ಆದರದಿಂದಿಷ್ಟಾರ್ಥವಿತ್ತು ಮೋದದಿಂದ ಮನ್ನಿಸುವ ॥ ॥ ೬ ॥ ಸಣ್ಣಮುತ್ತ ಕೆತ್ತಿಸೀದ ಸಕಲಾತಿಗಳಿಂದ । ಹೊನ್ನ ಹೊಸ ಜಾನುಜಂಘ ಹೊಳವ ಸೊಬಗಿನ ॥ ಉನ್ನಂತರಾಯಗುಣ ಉತ್ತಮ ರಾಜಾಶ್ವವೇರಿ । ಎನ್ನ ಹಯವದನ ರಂಗ ಯೆಲ್ಲರಿಗಿಷ್ಟಾರ್ಥ ಕೊಡುವ ॥ ೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೧. ರಾಗ ಭೈರವಿ, ಛಾಪುತಾಳ.

ಜಯತು ಭಕ್ತೋದ್ಧಾರ ಅಸುರಕುಲ ಸಂಹಾರ । ಜಯತು ದಶರಧಬಾಲ ಜಾನಕೀ ಲೋಲ ॥ ಪಲ್ಲ ॥ ಜಯತು ಜಯ ರಘುವೀರ ಶರಧಿಸಮ ಗಂಭೀರ ಏಕಪತ್ನೀ ಶೀಲ ತುಲಸಿವನಮಾಲಾ ॥ ಅನುಪಲ್ಲ ॥ ಈ ಮುದ್ದು ಈ ಮುಖವು ಅತಿಸೊಬಗು ಈ ಕಾಂತಿ । ಈ ಬಿಲ್ಲು ಈ ಬಾಣ ಈ ನಿಂತ ಭಾವ ॥ ಈ ತಮ್ಮ ಈ ರಾಣಿ ಈ ಬಂಟ ಈ ಭಾಗ್ಯ । ಇನ್ನ್ಯಾವ ದೇವರಿಗುಂಟು ಮೂರಲೋಕದೊಳಗೆ ॥ ೧ ॥ ಉಟ್ಟ ಪೀತಾಂಬರ ಉಡಿಗೆಜ್ಜೆ ವಡ್ಯಾಣ । ತೊಟ್ಟ ಕೌಸ್ತುಭಹಾರ ಪದಕಗಳಿಟ್ಟ ಕೊರಳೂ ॥ ಕೊಟ್ಟ ಭಾಷೆಗೆ ತಪ್ಪ ನೆರೆ ತನ್ನ ಭಕ್ತರಿಗೊಲಿದು । ಸೃಷ್ಟಿಯೊಳಗೆಣೆಗಾಣೆ ಕೌಸಲ್ಯರಾಮ ॥ ೨ ॥

## ೪೨. ರಾಗ ರೇಗುಪ್ತಿ, ಅಟತಾಳ.

ಮಾತುಮಾತಿಗೆ ಕೇಶವ । ನಾರಾಯಣ । ಮಾಧವಯೆನ್ನಬಾರದೆ ॥ ಹೇ ಜಿಹ್ವೆ ॥ ಪಲ್ಲ ॥ ಪ್ರಾತಃಕಾಲದೊಳೆದ್ದು ಪಾರ್ಥಸಾರಥಿಯನ್ನು । ಪ್ರೀತಿಯಿಂ ನೆನೆದರೆ ಪ್ರೀತನಾಗೋನು ಕೃಷ್ಣ ॥ ಅನುಪಲ್ಲ ॥ ಜಲಜನಾಭನ ನಾಮವು । ಈ ಜಗದೊಳು । ಜನನಮರಣಹರವು ॥ ಸುಲಭದಿಂದಿಹಪರ । ಸುಖಕೆ ಕಾರಣವಿದು । ತಿಳಿದು ತಿಳಿದು ವದರು ॥ ಹೇ ಜಿಹ್ವೆ ॥ ೧ ॥ ಕರಿರಾಜ ಶರಣೆನಲು । ಕಮಲೇಶ । ಕಾಯ್ದನಲ್ಲವೆ ಕರಿಯಾ ॥ ನರಮೃಗರೂಪದಿ ಪ್ರಹ್ಲಾದನ ಸಲಹಿದ । ಹರಿನಾಮ ಪ್ರಿಯವಲ್ಲವೆ ॥ ಹೇ ಜಿಹ್ವೆ ॥ ೨ ॥ ತರಳೆ ದ್ರೌಪದಿ ಶಾಲೆಯಾ । ಸೆಳೆಯಲಾಗ । ಹರಿ ನೀನೆ ಗತಿಯೆನಲು ॥ ದುರುಳನ ಮರ್ದಿಸಿ ತರಳೆಗಭಯವಿತ್ತ । ಹರಿ ಸರ್ವೊಡೆಯನಲ್ಲವೆ ॥ ಹೇ ಜಿಹ್ವೆ ॥ ೩ ॥ ಹೇಮಕಶಿಪುಸಂಭವಾ । ನಿರುತ ಹರಿ । ನಾಮವೆ ಗತಿಯೆನಲು ॥ ಶ್ರೀಮದನಂತ ಶ್ರೀಹಯವದನನು ತಾ । ಕಾಮಿತ ಫಲವೀಯನೆ ॥ ಹೇ ಜಿಹ್ವೆ ॥ ೪ ॥ ಶ್ರೀಃ ॥

## ೪೩. ರಾಗ ಕಾಂಬೋಧಿ, ಝಂಪೆತಾಳ.

ಭೀಮರಾಯನ ನಂಬಿ । ಭೀಮಸೇನನ ॥ ಭೀಮ ಭವವಾರಿಧಿಯ । ಬೇಗ ದಾಟುವರೆ ನಮ್ಮ ॥ ಪಲ್ಲ ॥ ಬಕ ಮೊದಲಾದ ಹಿಡಿಂಬಕ ದುರ್ಜನರ ಕೊಂದು । ಸುಖಬಡಿಸಿದನಂದು ದ್ವಿಜಕುಲಜರಾಗ ಕೂಡ ॥ ೧ ॥ ಜರಾಸಂಧನ ಕೂಡೆ । ವರ ಯುದ್ಧವನ್ನೆ ಮಾಡಿ । ಸರಕು ಮಾಡದೆ ಕೊಂದ । ಧಾರುಣಿಯೊಳಗೆ ನಿಂದಾ ॥ ೨ ॥ ಅಸುರ ಕೀಚಕನೆಂಬುವ ಸತಿಯು ಕೃಷ್ಣೆಯು । ಬಾಧಿಸೆ ಘಾಸಿಮಾಡಲವಂದ್ಯರ । ಹೇಸದೆ ಮೋಸದಿ ಕೊಂದಾ ॥ ೩ ॥ ಕಡು ತೃಷೆಗೆ ದುಶ್ಯಾಸನೊಡಲ ಬಗಿದು ರಕ್ತ । ಕುಡಿದಂತೆ ತೋರ್ದ ಸರ್ವೊಡೆಯ ದ್ರೌಪದಿ ಪ್ರಿಯ ॥ ॥ ೪ ॥ ಭೀಮ ತನ್ನ ಮರೆಹೊಕ್ಕ । ಸುಜನರ ಕಾವ । ಸ್ವಾಮಿ ಶ್ರೀಹಯವದನ । ರಾಮನಾಣೆ ಸತ್ಯವಿದು ॥ ೫ ॥ ಶ್ರೀಃ ॥

## ೪೪. ರಾಗ ಆರಭಿ, ಅಟತಾಳ.

ಪಾಲುಗಡಲೊಡೆಯ ಬಾರೋ ಎನ್ನ । ಮೇಲೆ ಕರುಣಾಮೃತದ ರಸ ಮಳೆಯ ಸುರಿವುತಲಿ ॥ ಪಲ್ಲ ॥ ನಾನಾ ರತುನಕಾಂತಿ ನವರಂಗ ಬಲಿಯಾಗಿ । ಧ್ಯಾನಿಪರ ಮನದಾಶ್ರಯಾ । ಶ್ರೀನಾಥ ಕಿಂಕಿಣಿ ಸ್ವರ ಮಂಜುರವದಿಂದಾ ॥ ೧ ॥ ನೂಪುರಧ್ವನಿಯೆಂಬ ನೂತನದ ರಸ ಮಳೆಯು । ಪಾಪಹರ ನಖಕಾಂತಿಯಾ । ದೀಪಾವಳಿಯು ನಡುವೆ ದೀನೋಕ್ತಿಯು ಕೆಡದಂತೆ ॥ ೨ ॥ ಪುರಟ ವಸನದ ಮಧ್ಯ ಹೊಳೆವ ನಾನಾಭರಣ । ಕರಕಂಜ ಕಂಬುಕಂಠ । ಸರಸ ಮುಖಚಂದ್ರ ಶೋಭನ ಮೂರ್ತಿ ಹಯವದನಾ ॥ ೩ ॥ ಶ್ರೀ ॥

## ೪೫. ರಾಗ ತೋಡಿ, ಆದಿತಾಳ.

ಅಕ್ಕಾ ನಂದಗೋಪನ ಅರಮನೆಯೊಳಗೊಬ್ಬ । ಅಕ್ರೂರ ಬಂದನಂತೇ ॥ ಪೊಕ್ಕು ಬಳಸಲಿಲ್ಲ ಪುಸಿಯನಾಡುವಳಲ್ಲ । ಇಕ್ಕೋ ಬಾಗಿಲ ಮುಂದೆ ಈಗ ರಥವ ಕಂಡೆ ॥ ಪಲ್ಲ ॥ ಮಧುರಾಪಟ್ಟಣವಂತೆ ಮಾವನ ಮನೆಯಂತೆ । ನದಿಯ ದಾಟಲುಬೇಕಂತೇ ॥ ಎದುರು ಯಾರಿಲ್ಲವಂತೆ ಏನೆಂಬೆ ಏಣಾಕ್ಷಿ । ಉದಯದಲ್ಲಿ ಪಯಣವಂತೆ ಉತ್ತಮ ದಿನವಂತೇ ॥ ೧ ॥ ಅಲ್ಲಿ ಹುಟ್ಟಿದನಂತೆ ಅರಸನ ಮಗನಂತೆ । ಇಲ್ಲಿಗೆ ಬಂದನಂತೇ ॥ ಎಲ್ಲ ಕಪಟವಂತೆ ಎಂದೂ ಹೇಗಿಲ್ಲವಂತೆ । ಅಲ್ಲಿ ತಾಯಿ ತಂದೆರ ಕಾಲಿಗೆ ನಿಗಡವಂತೇ ॥ ೨ ॥ ಮಲ್ಲರ ಕೂಟವಂತೆ ಮತ್ತೆ ಕಾಳಗವಂತೆ । ಬಲ್ಲಿದ ಗಜಗಳಂತೇ ॥ ಬಿಲ್ಲ ಹಬ್ಬವಂತೆ ಬೀದಿ ಶೃಂಗಾರವಂತೆ । ಇಲ್ಲಿ ಯಶೋದೆಯ ಕಣ್ಣೀಲುದಕವಂತೇ ॥ ೩ ॥ ಮತ್ತೆ ಪಾಂಡವರಂತೆ ಮೋಹದ ಸೋದರರಂತೆ । ಅತ್ತೆಯ ಮಕ್ಕಳಂತೇ ॥ ಸುತ್ತ ಶತ್ರುಗಳಂತೆ ಸಕಲ ಕಾರ್ಯಗಳಂತೆ । ಚಿತ್ತಜನಯ್ಯನ ಚಿತ್ತ ನಿಗಡಾಯಿತಂತೇ ॥ ॥ ೪ ॥ ತಾಳಲಾರೆವೆ ಸಿರಿತಾಟಂಕ ಹಯವದನನ್ನ । ಗಲಿನಾ ಹೇಗಿದ್ದೇವೆ ॥ ಕಾಲವಾಗದ ಮುನ್ನ ಬಾಲೆರೆಲ್ಲರು ಕೂಡಿ । ನೀಲವೇಣಿಯರೆಲ್ಲ ನಾಳೆ ಉದಯದಲಿ । ಆಣೆ ಇಟ್ಟು ತಡವ ಬನ್ನಿರೇ ಸಖಿಯೋ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೬. ರಾಗ ಸೌರಾಷ್ಟ್ರ, ಆದಿತಾಳ.

ಇಂದ್ರಾಧಿಪತಿ ನಿಮ್ಮ ವಂದಿಸೆನು ನಾನು । ಮಂದಗಮನೆ ರೂಪ ತೋರೆನಗೆ ॥ ಚಂದ್ರಶೇಖರ ಬೇಡ ಕುಂದಿಪುದೊ ನಿನ್ನ । ಬಂದಂತೆ ನಡೆ ನಿನ್ನ ಮನೆಗೇ ॥ ೧ ॥ ಅಚ್ಯುತಾನಂತನೆ ತೋರೊ ಶ್ರೀರೂಪವ । ಸಚ್ಚಿದಾನಂದ ತೋರೆನಗೆ ॥ ಹೆಚ್ಚಿಯು ಮಾಡದೆ ನಿನ್ನ ವನವೆಲ್ಲ ತಿರುಗಿ । ಹುಚ್ಚು ಮಾಡುವೆನಯ್ಯ ಕ್ಷಿತಿಪತಿ ನೇವ್ಯ ॥ ೨ ॥ ಎಂದು ಶ್ರೀರೂಪವು ನೋಡಿದಿಲ್ಲವೆಂದು । ಸುಂದರವೆಂದು ಹೇಳುವರೆಲ್ಲ ॥ ಅಂದವ ಕಂಡು ನೀ ಹಿಂದಟ್ಟಿ ತಿರುಗುವಿ । ನಂದನ ಕಂದನೆ ಕೇಳೆನ್ನ ಸೊಲ್ಲ ॥ ೩ ॥ ಹರಿಹರರಿಬ್ಬರು ಒಲಿದು ಮಾತಾಡಲು । ಕೊಳವ ಕಂಡಲ್ಲಿ ಎಲೆತೋಟ ॥ ಕೊಳವ ಕಂಡಲ್ಲಿ ಎಲೆತೋಟದೊಳಗಿರುವ । ಸುಳಿವ ಪೆಣ್ಣಿನ ಕಂಡು ಮರುಳಾದ ॥ ೪ ॥ ತೆಂಗಿನ ತಿಳಿಗೊನೆ ನಿಂಬೆ ಕಿತ್ತಳೆ ಬಾಳೆ । ಹೊಂಬಳೆ ಅಡಿಕೆ ವನಗಳು ॥ ಹೊಂಬಳೆಅಡಿಕೆವನದೊಳಾಡುವ । ರಂಬೆಯು ಕಂಡು ಹರ ಮರುಳಾದಾ ॥ ೫ ॥ ಅರಸಿನ ತಿಳಿಗೊನೆ ಹಲಸು ಕಿತ್ತಳೆ ಬಾಳೆ । ಬೆರಸಿ ಮಲ್ಲಿಗೆಯು ವನಗಳು ॥ ಬೆರಸಿಮಲ್ಲಿಗೆಯು ವನದೊಳಾಡುವ । ಸರಸಿಜಾಕ್ಷಿಯು ಕಂಡು ಮರುಳಾದ ॥ ೬ ॥ ಮುಲ್ಲೆಮಲ್ಲಿಗೆ ಜಾಜಿ ಅಲ್ಲಿ ಪಾರಿಜಾತ । ನಿಲ್ಲದೆ ನಲಿವೊ ರೂಡಿಗಳು ॥ ನಿಲ್ಲದೆ ನಲಿವೊ ರೂಡಿಯೊಳಗಾಡುವ । ಚಲ್ವೆಯು ಕಂಡು ಮರುಳಾದ ॥ ೭ ॥ ನೋಗೆ ನವಿಲುಗಳು ಗಿಣಿಹಿಂಡು ಕರುಗಳು । ನಲಿವೊ ಕೋಗಿಲೆ ವಂಶಗಳೂ ॥ ನಲಿವೊ ಕೋಗಿಲೆ ವಂಶದೊಳಾಡುವ । ಸುಳಿವ ಪೆಣ್ಣಿನ ಕಂಡು ಮರುಳಾದ ॥ ೮ ॥ ಕಾಲುಂಗ್ರ ಕಿರುಪಿಲ್ಲಿ ವೀರ ಮುದ್ರಿಕೆಗಳು । ಕಾಲಲಂದುಗೆ ಕಿರುಗೆಜ್ಜೆ ॥ ಕಾಲಲಂದುಗೆ ಕಿರುಗೆಜ್ಜೆಯುನಿಟ್ಟಿದ್ದ । ಬಾಲೆಯು ಕಂಡು ಮರುಳಾದ ॥ ॥ ೯ ॥ ಅರಳೋಲೆ ಮೂಗುತಿ ಹಣೆಗೆ ಪಚ್ಚೆಯು ಬೊಟ್ಟು । ಕದಪು ಕನ್ನಡಿಯು ಕುಡಿಹುಬ್ಬು ॥ ಕದಪುಕನ್ನಡಿಯು ಕುಡಿಹುಬ್ಬ ಹೆಣ್ಣಿನ । ತವಕ ವರ್ಣಿಸಲಳವಲ್ಲ ॥ ೧೦ ॥ ಚೆಲುವ ಚರಣಗಳು ವದನನಾಸಿಕಗಳು । ಕುರುಳು ಕೂದಲು ಕುಂತಳೆಗಳು ॥ ಕುರುಳುಕೂದಲು ಕುಂತಳೆಗಳ ಹೆಣ್ಣಿನ । ಜಡೆಯು ವರ್ಣಿಸಲಳವಲ್ಲ ॥ ೧೧ ॥ ಘೋರ ಕುಚದ ಮೇಲೆ

ಚಾರು ಗಂಧವ ಪೂಸಿ । ಆಲಯುಕಿಡಿದಳೆ ಕಮಲವಾ ॥ ಆಲಯುಕಿಡಿದಳೆ ಕಮಲದ ಕಡೆಗಣ್ಣಾ । ಛಾಯು ಬಂದ್ದರನ ಕಂಗೆಡಿಸಿತು ॥ ೧೨ ॥ ಕಕ್ಕಸ ಕುಚದ ಮೇಲೆ ಅಷ್ಟ ಹಾರಗಳ್ ಪೊಳೆಯೆ । ಹಸ್ತಗಟ್ಟುಗಳ್ ಹೊಳವುತ್ತಾ ॥ ಹಸ್ತಗಟ್ಟುಗಳ್ ಹೊಳೆಯುವ ಹೆಣ್ಣಿನ । ಮಿತ್ರಿಯು ಕಂಡು ಹರ ಮರುಳಾದ ॥ ೧೩ ॥ ನೋಡಳು ನುಡಿಯುಳು ಹರನ ಕೂಡೆ ಮಾತಾಡಳು । ಓಡುತ ಚೆಂಡ ಹ್ಯೊವಳು ॥ ಓಡುತ ಚೆಂಡ ಹ್ಯೊವ ಹೆಣ್ಣಿನ ನೋಡಿ । ಮೂರುಕಣ್ಣಾವನು ಮರುಳಾದ ॥ ೧೪ ॥ ಅವನ್ಯಾಲೆ ಯಾಡೋಳು ಒಮ್ಮೊಮ್ಮೆ ನೋಡೋಳು । ತಿರುಗೊಮ್ಮೆ ನೋಡೋಳು ತನ್ನೊಳಗೆ ॥ ತನ್ನೊಳಗೆ ತಾ ನಗುವೊಳು ಬೊಮ್ಮನ । ಮಗನ ಮರುಳು ಮಾಡಿ ನಡೆಯೊಳು ॥ ೧೫ ॥ ಸೃಷ್ಟಿಯುನೆಲ್ಲ ಹೊಟ್ಯಾಗೆ ಇಂಬಿಟ್ಟು । ವಟಪತ್ರಶಾಯಿಯಾಗಿ ಮಲಗಿದ್ದ ॥ ವಟಪತ್ರಶಾಯಿಯಾಗಿ ಮಲಗಿದ್ದ ಶ್ರೀಹರಿ । ಕೃಷ್ಣನೆಂದ್ದರನು ತಿಳಿದನು ॥ ೧೬ ॥ ಈರೇಳು ಲೋಕವ ಹೃದಯುದೊಳಿಂಬಿಟ್ಟು । ಆಲದೆಲೆಯು ಮೇಲೆ ಮಲಗಿದ್ದ ॥ ಆಲವೆಲೆಯು ಮೇಲೆ ಮಲಗಿದ್ದ ಶ್ರೀಹಯುವದನ । ನೆಂದ್ದರನು ತಿಳಿದನು ॥ ೧೭ ॥ ಶ್ರೀಃ ॥

## ೪೭. ರಾಗ ಕಾನಡ, ಅಟತಾಳ.

ಬರಿದೆ ಸಂಸಾರದಿ ಜರಿದೆ । ಹರಿ ನಿನ್ನ ಅನುಸರಿಸುತಿರದೆ ॥ ಪಲ್ಲ ॥ ಕರಿ ದೇವದೇವ ಕರುಣಿ ಕಣ್ದೆರದೆ ॥ ತರಿದೆ ಮಕರಿಯು ಮುಖವನ್ನು ಬೇಸರದೇ ॥ ೧ ॥ ವರವೇಶ ಪಾಹಿಯೆನೆ ಅಜಮಿಳನ ಪೊರೆದೆ ॥ ಮುರಿದೆ ಯಮಭಟರ ಪಾಶಗಳ ನೀ ತರಿದೇ ॥ ೨ ॥ ಕರದೆನ್ನ ಹಯುವದನ ತತ್ವಗಳನೊರದೆ ॥ ಮೆರದೆ ಮಹಿಮೆಯುನು ನಿನಗಿಯೊಂದರಿದೆ ॥ ೩ ॥

## ೪೮. ರಾಗ ಕಾಂಬೋಧಿ, ಝಂಪೆತಾಳ.

ಆರೋಗಣೆಯ ಮಾಡು ಸಾರಸುಖದೊಡೆಯಾ ॥ ಪಲ್ಲ ॥ ಸತ್ಯವಾದಾ ಜಗಕೆ ಕರ್ತೃ ಕಾರಣ ನೀ ನೇ । ಮುಕ್ತಿದಾಯುಕ ನಿತ್ಯತೃಪ್ತನಹುದೈ ಸತ್ಯವಾದವತಾರ ಸಕಲಗುಣಪರಿಪೂರ್ಣ । ಭಕ್ತಿದಾಯುಕ ಸಿರಿ ಪರಮದಯಾಳೂ ॥ ೧ ॥ ಅಣು ರೋಮಕೂಪದಲಿ ಅಂಡಜಾಂಡಗಳಿರಲು ।

ಘನ ಕೃಪಾಂಬುಧಿ ನಿಮ್ಮ ಪೊಗಳಲಳವೇ ॥ ಫಣಿಶಾಯಿಯಾಗಿದ್ದ ಭುವನ ವ್ಯಾಪಕ ಹರಿಯು । ಘನ ಭಕುತಿಲ್ಯಜಭವರು ಪೂಜೆ ಮಾಡುವರೂ ॥ ೨ ॥ ಗಂಗೆ ಗೋದಾವರಿ ತುಂಗಭದ್ರೆ ಯಮುನೆ । ರಂಗಸನ್ನಿಧಿಯಾದ ಕಾವೇರಿಯೂ ॥ ಮಂಗಳ ಭೀಮರಥಿ ನಿಮಗೆ ಮಜ್ಜನಕೆ ಅಣಿಮಾಡಿ । ಅಂಗಜನಯ್ಯ ಭಾಪೆಂದು ಪೊಗಳೀ ॥ ೩ ॥ ರನ್ನಮಯವಾಗಿರ್ದ ಹೊನ್ನ ಮಂಟಪದೊಳಗೆ । ಸ್ವರ್ಣಪಾತ್ರೆಗಳಲ್ಲಿ ಸ್ವಯಂಪಾಕವೂ ॥ ನಿನ್ನ ಸೊಸೆ ವಾಣಿ ಭಾರತಿದೇವಿ ಕಡುಜಾಣೆ । ಚೆನ್ನಾಗಿ ನೈವೇದ್ಯವನ್ನೆ ಮಾಡುವರೂ ॥ ೩ ॥ ಗಂಧ ಕಸ್ತೂರಿ ಪುಣುಗು ಚಂದದ ಜವ್ವಾಜಿ । ಮುಂದೆ ಕುಂಕುಮದ ಕೇಸರಿಯ ಲೇಪ ॥ ಚಂದದ ಕೇದಿಗೆ ಮುಡಿವಾಳ ಸಂಪಿಗೆ । ಕಂದರ್ಪನಯ್ಯಗೊಪ್ಪಿತು ಮಲ್ಲಿಗೇ ॥ ೫ ॥ ದೆಸೆದೆಸೆಗೆ ಪರಿಮಳಿಪ ಕುಶಲದ ಚಿತ್ರಾನ್ನ । ಬಿಸಿ ದೋಸೆಗೆ ಬೆಣ್ಣೆ ಲೇಹ್ಯ ಪೇಯಾ ॥ ಬಸುರೊಳಗೆ ಈರೇಳು ಜಗವನಿಂಬಿಟ್ಟವಗೆ । ನಸುನಗುತ ಇಂದಿರಾದೇವಿ ಬಡಿಸೇ ॥ ॥ ೬ ॥ ನೂರು ಯೋಜನದಗಲ ಸರಸಿಜಬ್ರಹ್ಮಾಂಡ ಹದಿ। ನಾರು ಬಣ್ಣದ ಚಿನ್ನದ್ದರಿವಾಣವೂ ॥ ಸಾರೆಯುಲಿ ಪೊಂಬಟ್ಟಲೆಂಬ ನಾಗರದೊಳಗೆ । ಮೇರುಗಿರಿಯೆಂಬೊ ದೀಪಗಳು ಬೆಳಗೇ ॥ ೭ ॥ ಆ ಕಮಲೆ ಮಾಡಿದ್ದು ನಾಲ್ಕು ಬಗೆ ಘೃತ ಸೂಪ । ಲೋಕಪತಿಗನುವಾದ ದಿವ್ಯಾನ್ನವೂ ॥ ಬೇಕಾದ ಪಂಚಭಕ್ಷ್ಯಗಳು ರಸಾಯನವ । ಏಕಾಂತದಲಿ ನಿಮ್ಮ ದೇವಿ ಬಡಿಸೇ ॥ ೮ ॥ ಖಳರ ಕುಲವೈರಿಗೆ ತಿಳಿ ನೀರುಮಜ್ಜಿಗೆ । ಎಳೆನೀರು ಪಾನಕ ಶೀತಳುದಕಾ ॥ ಬಳಲಿದಿರಿ ಬಳಲಿದಿರಿ ಯೆನುತ ಹಯವದನಗೆ । ನಳಿನಾಕ್ಷಿ ಕರ್ಪೂರವೀಳ್ಯವನೆ ಕೊಡಲೂ ॥ ೯ ॥ ಶ್ರೀಃ ॥

## ೪೯ ರಾಗ ಆರಭಿ, ಆದಿತಾಳ.

ಏನೆಂದು ಸ್ತುತಿಸಾಲಿ ದೇವ ರಂಗಯ್ಯಾ । ನಿನ್ನ । ಜಾಣತನವ ನೀನೇ ಬಲ್ಲೆ ಶ್ರೀರಂಗಯ್ಯಾ ॥ ಪಲ್ಲ ॥ ಮತ್ಸ್ಯನಾಗಿ ಶ್ರುತಿಯ ತಂದೆ ರಂಗಯ್ಯಾ । ನೀನು । ಕುತ್ಸಿತ ತಮನ ಕೊಂದೆ ರಂಗಯ್ಯಾ ॥ ಸ್ವಚ್ಛ ಕೂರುಮನಾದೆ ರಂಗಯ್ಯಾ । ಭಕ್ತ । ರಿಚ್ಛೆಯ ಪಾಲಿಸಿದೆ ಶ್ರೀರಂಗಯ್ಯಾ ॥

॥ ೧ ॥ ಆದಿವರಹ ನೀನಾದೆ ರಂಗಯ್ಯಾ । ನೀನು । ಪೋದ ಮೇದಿನಿಯ ತಂದೆ ರಂಗಯ್ಯಾ ॥ ಭೇದಿಸಿ ಕಂಭದಿ ಬಂದೆ ರಂಗಯ್ಯಾ । ಪ್ರ । ಹ್ಲಾದನ ಕಾಯ್ದೆ ಶ್ರೀರಂಗಯ್ಯಾ ॥ ೨ ॥ ಬಲಿಯನ್ನು ವಂಚಿಸಿದಂಥ ರಂಗಯ್ಯಾ । ನೀನು । ನೆಲನ ಓರಡಿಮಾಡ್ದೆ ರಂಗಯ್ಯಾ ॥ ಬಲವಂತ ಭಾರ್ಗವನಾದೆ ರಂಗಯ್ಯಾ । ನೀನು । ಛಲದಿ ಕ್ಷತ್ರಿಯರ ಗೆದ್ದೆ ರಂಗಯ್ಯಾ ॥ ೩ ॥ ಜಲಧಿಯನು ಕಟ್ಟಿದೆ ರಂಗಯ್ಯಾ । ಹತ್ತು । ತಲೆಯವನ ಕುಟ್ಟಿದೆ ರಂಗಯ್ಯಾ ॥ ಮಲತ ಮಾವನ ಕೊಂದೆ ರಂಗಯ್ಯಾ । ಯದು । ಕುಲವನುದ್ಧರಿಸಿದೆ ಶ್ರೀರಂಗಯ್ಯಾ ॥ ೪ ॥ ಸತಿಯರ ಮೋಹಿಸಿದೆ ನೀನು ರಂಗಯ್ಯಾ । ಬಲು । ಚತುರ ಬೌದ್ಧನಾದೆ ರಂಗಯ್ಯಾ ॥ ಖತಿಯಿಂದ ಹಯವೇರಿದೆ ರಂಗಯ್ಯಾ । ದು । ರ್ಮತಿಯ ಕಲಿಯ ಕೊಂದೆ ಶ್ರೀರಂಗಯ್ಯಾ ॥ ೫ ॥ ತ್ರಿಭುವನದೊಳಧಿಕ ರಂಗಯ್ಯಾ । ನೀನು । ಉಭಯ ಕಾವೇರಿವಾಸ ರಂಗಯ್ಯಾ ॥ ವಿಭೀಷಣಗೆ ಪ್ರಸನ್ನ ರಂಗಯ್ಯಾ । ನೀ । ನಭಯವಿತ್ತೆನ್ನ ಕಾಯೊ ಶ್ರೀರಂಗಯ್ಯಾ ॥ ೬ ॥ ವಾದಿರಾಜನಿಗೊಲಿದೆ ರಂಗಯ್ಯಾ । ನೀನು । ಮೋದಿ ಹಯವದನನಾದೆ ರಂಗಯ್ಯಾ ॥ ಸಾಧಿಸಿ ಖಳರ ಕೊಂದೆ ರಂಗಯ್ಯಾ । ವಿ । ನೋದದಿ ವೇದವ ತಂದೆ ಶ್ರೀರಂಗಯ್ಯಾ ॥ ೭ ॥ ಶ್ರೀಃ ॥

## ೫೦. ರಾಗ ಮಧ್ಯಮಾವತಿ, ಝಂಪೆತಾಳ.

ರಾಮಕುದ ಸರಸಿರುಹ ಭೃಂಗ । ರೋಮ ರೋಮದಿ ಕೋಟಿ ಲಿಂಗ ಅಸುರರ ಭಂಗಾ ॥ ಪಲ್ಲ ॥ ಒಂದು ನಿಮಿಷಕೆ ಪೋಗಿ ಸಂಜೀವನವ ತಂದೆ । ಕಂದುಕೊರಳನ ಭಜಕ ನಂದನನ ನೀ ಕೊಂದೆ ॥ ಇಂದ್ರ ಸೂನುವಿನ ಭಕುತಿಗೆ ರಥಾಗ್ರದಿ ನಿಂದೆ ಮಂದರಧರನ ಮುಂದೆ ಸುರ । ವೃಂದವರಿಯೆ ಪುರವ ಹೋಮಗೈದು ಬಂದೆ ॥ ೧ ॥ ಉರು ಗದೆಯಿಂದ ಕೌರವನ ತೊಡೆಗಳನು ಮುರಿದೆ । ದುರುಳ ದುಶ್ಶಾಸನನ ಕರುಳುಗಳ ನೀ ಹಿರಿದೇ । ಕರವೆತ್ತಿ ಬಲವೆರಡ ಕರೆದೆ । ಭರದಿ ಬಂದವನ ಬಂಧುಗಳ ನೀ ತರಿದೆ । ಗುರು ಮಧ್ವಮುನಿಯಾಗಿ ಶಾಸ್ತ್ರಗಳನೊರೆದೆ ।

॥ ೨ ॥ ಧರೆಯೊಳತ್ಯಧಿಕವೆನಿಸಿದ ಸೋದೆಪುರವಾಸಾ । ಸಿರಿ ಹಯವದನನ ಪರಮ ಪ್ರಿಯದ ದಾಸಾ ॥ ನೆರೆ ನಿನ್ನ ನಂಬಿರ್ದ ಭಕ್ತರಿಗೆ ಕೊಡು ಲೇಸಾ ಕರುಣವಾರಿಧಿ ಪುಣ್ಯವಾಸಾ ಜಗ । ದ್ಗುರುವೆ ನೀನಹುದಯ್ಯ ಮುಖ್ಯಪ್ರಾಣೇಶಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೫೧. ರಾಗ ಆರಭಿ, ಝಂಪೆತಾಳ.

ಕಾಯಯ್ಯ ಕರುಣಿ ಮುಕ್ತಿ ಸರಣಿ । ಮೋಹಾಂಧಕಾರ ತರಣಿ । ಕರುಣಿ ಕಾಯಯ್ಯ ॥ ಪಲ್ಲ ॥ ನಾನಾ ಯೋನಿಗಳಲ್ಲಿ ನಿಂದು ನೊಂದೆ । ಹೀನತೆಯ ಕಳೆದು ಕಾಯಯ್ಯ । ಗೋವಿಂದ ಮುಕುಂದ ಇದೇ ಚಂದಾ ॥ ॥ ೧ ॥ ನೀನಲ್ಲದನ್ಯರನು ನಾನರಿಯೆ । ಜ್ಞಾನಿಗಳರಸ ಕಾದುಕೊಂಬದಿನ್ನಾರು । ನಿನ್ನ ತೋರು ಮುಂದಾರು ॥ ೨ ॥ ಶ್ರೀಹಯವದನ ಪ್ರಭುವೆ ನೀನು । ಸರ್ವಜ್ಞ ನೇಹವನುಮಾಡು । ಎಂದೆಂದು ನಾ ದಾಸಾ । ಶ್ರೀನಿವಾಸ ಪಾಪನಾಶಾ ॥ ೩ ॥ ಶ್ರೀಃ ॥

### ೫೨. ರಾಗ ಕಲ್ಯಾಣಿ, ಆದಿತಾಳ.

ಹರಿ ಬಾರನೆ । ನರಹರಿ ಬಾರನೆ । ಕರಿಭಯಹರ ಮುರಾರಿ ಬಾರನೆ ॥ ಪಲ್ಲ ॥ ವೃಂದಾವನದ ಗೋವಿಂದ ಬಾರನೆ ॥ ಕಂದರ್ಪನ ತಂದೆ ಮುಕುಂದ ಬಾರನೆ ॥ ೧ ॥ ಎಂದು ಕಾಂಬೆವೋ ನಾವವನೆಂದು ಕಾಂಬೆವೋ ॥ ಇಂದಿರೆಯರಸನನೆಂದು ಕಾಂಬೆವೋ ॥ ೨ ॥ ಧನ ನಿತ್ಯವೆ ಯೌವನ ನಿತ್ಯವೆ ॥ ಜನ ನಿತ್ಯವೆ ಕರಣ ನಿತ್ಯವೇ ॥ ೩ ॥ ಭವಗೊಲಿದ ಪಾಂಡವಗೊಲಿದ ॥ ಧ್ರುವಗೊಲಿದ ಮಾಧವ ಒಲಿದಾ ॥ ೪ ॥ ಇಂದುವರ್ಣದ ಹಯವದನನಾದ ॥ ಮಂದರಧರನ ಸಖಿ ತಂದು ತೋರೆನಗೆ ॥ ೫ ॥ ಶ್ರೀಃ ॥

### ೫೩. ರಾಗ ಪೂರ್ವಿ, ಅಟತಾಳ.

ಕೃಷ್ಣ ಭವರೋಗದ ಮದ್ದು । ಕೃಷ್ಣ ಅಭಿಮಾನವ ಕ್ಯಾವಾತ ಳಿಂದಲ್ಲಿದ್ದು ॥ ಪಲ್ಲ ॥ ದುಷ್ಟ ದನುಜರ ಹುಡಿ । ಗುಟ್ಟಿ ನಂಬಿದ ಸುರರ ॥

ದಿಟ್ಟರ ಮಾಡಿದ ಜಗ । ಜಟ್ಟಿ ರಂಗ ಧೀರಾ ॥ ೧ ॥ ಮತ್ತೆ ಕೌರವರ ಗೆದ್ದು । ಚಿತ್ತದಿ ತನ್ನ ನಂಬಿದ ॥ ಪಾರ್ಥರ ಪಾಲಿಸಿದ ಸ । ಮರ್ಥ ಪಾಲಿಸಿದ ಪಾದ ॥ ೨ ॥ ಮಧ್ವವರಪೂಜಿತ ಪ । ಯೋಬ್ಧಿತನುಜೆಯುರಸಾ ॥ ಹೃದ್ಯ ಹಯವದನ ಸ । ವೃದ್ಧ ವೈಕುಂಠಾಧೀಶಾ ॥ ೩ ॥ ಶ್ರೀಃ ॥

## ೫೪. ರಾಗ ಬಿಲಹರಿ, ಅಟತಾಳ.

ಮಾಕಾಂತೆಯುರಸನ ತೋರೆನಗಮ್ಮ । ಸಾಕುವ ಸರಸನ ತೋರೆ ॥ ॥ ಪಲ್ಲ ॥ ಕಣ್ಣೆರಡುಸಾಸಿರುಳ್ಳವನಂಗದಿ । ಕಣ್ಣು ಮುಚ್ಚಿ ಮಲಗಿಪ್ಪನ ॥ ಹೊನ್ನು ಮಣ್ಣಿನಾ ರಾಶಿಯಿಂದ ಕೂಡಿಪ್ಪನ । ಮಣ್ಣು ಕೂಡದ ದಿವ್ಯ ಕಾಯನಾ ॥ ೧ ॥ ಮಣ್ಣಿನ ದೇವರ ಮುಖದಿಂದ । ಮಣ್ಣಿಗೆ ಶಣಸುವರ ಭುಜದಿಂದ ॥ ಮಣ್ಣು ಹಾಡುವರ ತೊಡೆಯಲ್ಲಿ ಮಾಡಿ ಮತ್ತೆ । ಮಣ್ಣು ಚರಣಾದಿ ಪುಟ್ಟಿಸಿದನಾ ॥ ೨ ॥ ಕಣ್ಣು ಮುಚ್ಚದನ ಕಣ್ಣು ತೊರದನಾ । ಹೆನ್ನಾಳುನುರುಬಿಲಿ ಮುಕ್ಕಣ್ಣನಾ ॥ ಮಣ್ಣನಳದು ಮಣ್ಣಿನ ರಸನೊರಸಿದ । ಮಣ್ಣಿನ ಮಗಳನಾಳಿದನಾ ॥ ೩ ॥ ಮಣ್ಣು ಪೊತ್ತನ ಧರಿಸಿದ ಚಿಣ್ಣನ । ಮಣ್ಣು ಮೆದ್ದ ಸಣ್ಣ ಬಾಯೊಳು ॥ ಮಣ್ಣನೆ ತೋರಿದ ನಂದನ ರಾಣಿಗೆ । ತಲ್ಲಣ ಹಬ್ಬವ ಕೊಟ್ಟ ಧೀರಾ ॥ ೪ ॥ ಕನ್ನಗಳ್ಳರ ಕೊಂದು ಕಣ್ಣಿಲ್ಲದವರಿಗೆ । ಕಣ್ಣು ಚೆರಿಸಿ ಕೊಟ್ಟ ಚದುರನಾ ॥ ಕಣ್ಣಿಲ್ಲದವನಿಗೆ ಕಣ್ಣು ಕೊಟ್ಟನಂತ । ಕಣ್ಣುಳ್ಳ ರೂಪವ ತೋರ್ದನಾ ॥ ೫ ॥ ಹೆಣ್ಣು ಮೋಹಿಸುವನ ಸುಟ್ಟುರಿ । ಗಣ್ಣನ ಮರುಳು ಮಾಡಿದನಾ ॥ ಹೆಣ್ಣನುಂಗುಟದಿ ಪಡದು ತ । ಮ್ಮಣ್ಣನ ಮಣ್ಣಿನೊಡೆಯ ಮಾಡಿಸಿದನಾ ॥ ೬ ॥ ಮಣ್ಣಿಗಾಗಿ ಬಂದು ಮಣ್ಣನಾಳಿದ ದುರ್ಜನ । ದಾನವರ ಕೊಂದನ ॥ ಹೆಣ್ಣು ಮಣ್ಣಿಲ್ಲದ ವಾದಿರಾಜನಿಗೆ । ಪ್ರಸನ್ನನಾದ ಹಯವದನನಾ ॥ ೭ ॥ ಶ್ರೀಃ ॥

## ೫೫. ರಾಗ ಮಧ್ಯಮಾವತಿ, ಆದಿತಾಳ.

ರಂಡಾಪುತ್ರ ಮಾಯಾವಾದಿ ಹೆಂಡತಿಯು ದಂಡಿಸಲಾರಿ । ಭೂ । ಮಂಡಲಕ್ಕೆ ಒಡೆಯ ನೀನ್ಹ್ಯಾಗಾದ್ಯೋ ॥ ಪಲ್ಲ ॥ ನೇಹ ನಾನಾಸ್ತಿ ಕಿಂಚನವೆಂಬೊ ಶ್ರುತಿಗೆ ॥ ನ ಹಿ ನ ಹಿ ಜಾನಾಸಿ ನಿಜಾರ್ಥವಾ ॥ ೧ ॥

ಮಂಡುಕದ ಪರಿಯಂತೆ ಲಂಡನುತನ ॥ ಹೆಂಡ ಕುಡಿದ ಬಡ್ಡಿಯಂತೆ ಕೂಗಿದ್ಯಲ್ಲೋ ॥ ೨ ॥ ಸೋಽಹಂ ಬ್ರಹ್ಮ ಯೆನ್ನದಿರು ಪಾಷಂಡ ಪಂಡಿತಾ । ಅಹಂ ಕರ್ತಾ ಅಹಂ ಭೋಕ್ತಾ ಯೆನ್ನದಿರೋ ॥ ೩ ॥ ಹರಿಪಾದೋದಕ ಶಿರದಲ್ಲಿ ಧರಿಸಿದ್ದ ॥ ಹರನ ಭಾವವನ್ನ ತಿಳಿಯಲಿಲ್ಲೋ ॥ ೪ ॥ ಈರೇಳು ಲೋಕದೊಡೆಯ ಹಯವದನನ ಪಾದ ॥ ಸರಸಿಜಗಳನೆ ಬಿಟ್ಟೆ ಯೆಲ್ಲೋ ಮಾಯಾವಾದಿ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೫೬. ರಾಗ ಪಂತುವರಾಳಿ, ಧ್ರುವತಾಳ.

ಭೂರಿನಿಗಮವ ಕದ್ದ ಚೋರ ದೈತ್ಯನ ಗೆದ್ದ । ಸಾರ ವೇದಗಳ ಧರೆಗಿತ್ತ । ಸಾರ ವೇದಗಳ ಧರೆಗಿತ್ತ ಮತ್ಸ್ಯವ । ತಾರಗಾರತಿಯ ಬೆಳಗಿರೆ ॥ ॥ ೧ ॥ ಆ ವಾರಿಧಿಮಥನದಲಿ ಸೇವೆಯಲಿ ಗಿರಿ ಮುಳುಗೆ । ನೀವಿ ಬೆನ್ನಾತ ಸುರನುತ ॥ ನೀವಿ ಬೆನ್ನಾತ ಸುರನುತ ಕೂ । ರ್ಮಾವತಾರಾಗಾರತಿಯ ಬೆಳಗಿರೆ ॥ ೨ ॥ ಧಾತ್ರಿಯನು ಕದ್ದೊಯ್ದ ದೈತ್ಯನ ಮಡುಹಿದ । ಎತ್ತಿ ದಾಡೆಯಲಿ ನೆಗಹಿದಾ । ಎತ್ತಿ ದಾಡೆಯಲಿ ನೆಗಹಿದ ಶ್ರೀವರಾಹ । ಮೂರ್ತಿಗಾರಾತಿಯ ಬೆಳಗಿರೆ ॥ ೩ ॥ ಕಡು ಬಾಲನ ನುಡಿ ಕೇಳೀ ಒಡೆದು ಕಂಭದೊಳುದಿಸಿ । ಒಡಲ ಸೀಳಿದನೆ ಹಿರಣ್ಯಕನ ॥ ಒಡಲ ಸೀಳಿದನೆ ಹಿರಣ್ಯಕನ ನರಸಿಂಹ । ಒಡೆಯಗಾರತಿಯ ಬೆಳಗಿರೆ ॥ ೪ ॥ ಸಿಂಹಾಧಿಪತಿ ಬಲಿಯ ಭೂಮಿ ಮೂರಡಿ ಬೇಡಿ । ಆ ಮೂರು ಜಗವ ಈರಡಿಯ ॥ ಆ ಮೂರು ಜಗವ ಈರಡಿಯ ಮಾಡಿದ । ವಾಮನಗಾರತಿಯ ಬೆಳಗಿರೆ ॥ ॥ ೫ ॥ ಅಂಬರ ಕೇಶನ್ನ ನಂಬಿದ ಕ್ಷತ್ರಿಯರ । ಸಂಭ್ರಮ ಕುಲವ ಸವರಿದ ॥ ಸಂಭ್ರಮ ಕುಲವ ಸವರಿದ ಪರಶುರಾಮ । ನೆಂಬಾಗಾರತಿಯ ಬೆಳಗಿರೆ ॥ ೬ ॥ ತಂದೆ ಕಳುಹಲು ವನಕೆ ಬಂದಲ್ಲಿ ಸೀತೆಯ । ತಂದ ರಾವಣನ ತಲೆ ಹೊಯ್ದ ॥ ತಂದ ರಾವಣನ ತಲೆಹೊಯ್ದ ರಘುರಾಮ । ಚಂದ್ರಗಾರತಿಯ ಬೆಳಗಿರೆ ॥ ೭ ॥ ದುಷ್ಟ ಯಮಳಾರ್ಜುನರಾಭೀಷ್ಟವ ಸಲಿಸಿದ । ದುಷ್ಟ ಕಂಸನ್ನ ಕೆಡಹಿದ ॥ ದುಷ್ಟ ಕಂಸನ್ನ ಕೆಡಹಿದ ನಮ್ಮ ಶ್ರೀ । ಕೃಷ್ಣಗಾರತಿಯ ಬೆಳಗಿರೆ ॥ ೮ ॥ ರುದ್ರನ್ನ ತ್ರಿಪುರದೊಳಿದ್ದ

ಪತಿವ್ರತೆಯು । ಬುದ್ಧ ಸ್ತ್ರೀವ್ರತವ ಕೆಡಿಸಿದ ॥ ಬುದ್ಧ ಸ್ತ್ರೀವ್ರತವ ಕೆಡಿಸಿದ ಬತ್ತಲೆ । ಬೌದ್ಧಗಾರತಿಯು ಬೆಳಗಿರೆ ॥ ೯ ॥ ಪಾಪಜನ ಭಾರಕ್ಕೆ ತಾ ಪೃಥ್ವಿ ಕುದಿಯುಲು । ತಾ ಪಿಡಿದ ಖಡ್ಗ ತುರಗವಾ ॥ ತಾ ಪಿಡಿದ ಖಡ್ಗ ತುರಗವನೇರಿದ ಕಲ್ಕಿ । ರೂಪಾಗಾರತಿಯು ಬೆಳಗಿರೆ ॥ ೧೦ ॥ ಮುತ್ತೈದೆ ನಾರಿಯರು ಮುತ್ತಿನಾರತಿ ಮಾಡಿ । ಹತ್ತಾವತಾರ ಹಯವದನನ ॥ ಹತ್ತವತಾರ ಹಯವದನನ ಪಾಡುತ ಹೊಸ । ಮುತ್ತಿನಾರಾತಿಯು ಬೆಳಗಿರೆ ॥ ೧೧ ॥ ಶ್ರೀ ॥

## ೫೭. ರಾಗ ಶಂಕರಾಭರಣ, ಆದಿತಾಳ.

ಕರದು ತನ್ನಿರೋ । ಕನ್ನಗಾರರ । ಕರದು ತನ್ನಿರೋ ॥ ಪಲ್ಲ ॥ ನಮ್ಮ ಹರಿಯ ಗುಣಂಗಳ ಕದ್ದ ಹಗಲು ಕನ್ನಗಾರರ ॥ ಅನುಪಲ್ಲ ॥ ರೂಪವಿಲ್ಲ ಗುಣವಿಲ್ಲ । ತಾ ಪರಬೊಮ್ಮನೆಂಬ ॥ ಪಾಪಿಗಳನೆ ಕರಿಯೊವಿ । ರೂಪರನ್ನ ಮಾಡುವ ॥ ೧ ॥ ಧೊರೆಯಿಲ್ಲ ಗುರುವಿಲ್ಲ । ಹರಿಯು ಪರನು ಒಂದೆಯೆಂಬ ॥ ಶಿರಕೆ ಪಿತ್ತ ಅಡರಿದಂತೆ । ಮರುಳು ಮಾತುಗಾರರ ॥ ೨ ॥ ವೇದಶಾಸ್ತ್ರ ಪುಸಿಯೆಂದು । ಸಾಧುಜನರ ಕಾಡುತಿಹ ॥ ಕಾವ ತಮಸಿನೊಳಗೆ ಬಿದ್ದ । ಕಾಣದೆ ಹಯವದನನ್ನ ॥ ೩ ॥ ಶ್ರೀ ॥

## ೫೮. ರಾಗ ಶಂಕರಾಭರಣ, ಆದಿತಾಳ.

ಹೀಗೆ ಮೆಚ್ಚಿದೆ ಹೆಂಗಳರನ್ನೆ । ಹಲವು ರೂಪ ತಾಳಿದವನ ॥ ಪಲ್ಲ ॥ ರಾಗ ವಿಗಿಲು ಲಕುಮಿರಮಣ । ಭೋಗಿರಾಜಶಯನನನ್ನಾ ॥ ॥ ಅನುಪಲ್ಲ ॥ ಜಲದಿ ಚರಿಸುತಿಹನು ಸತತ । ಒಲಿದು ಶಿರವ ನೆಗಹಿ ನೋಡ । ಸಲೆ ಏಕಾರ ಕೋರೆಪಲ್ಲು । ಫಲದ ಉಗ್ರರೂಪದವನಾ ॥ ನೆಲವನಳೆದು ತಾಯಿ ತಲೆಯ । ಕಳೆದು ಕರಡಿ ಕಪಿಯೊಳಾಡಿ । ಒಲಿದು ಗೋವ ಕಾಯ್ದು ಬ । ತ್ತಲೆ ಕೊಳಲು ತುರಗವೇರ್ದನ ॥ ೧ ॥ ನೊಗಡು ಗಂಧಯೆಸೆವ ತನುವು । ತೆಗೆದ ಬಾಯಿ ಕುಗ್ಗಿದ ಬೆನ್ನು । ಅಗಿಯುತಿಪ್ಪ ಮುಸುಡುರೌದ್ರ । ಹೊಗೆಯು ತೋರ್ವ ನಯನದವನಾ ॥ ವಿಗಡ ವಿಪ್ರ ರಾಜವೈರಿ । ಬಗೆಯುವಿಡಿದ ಅರಣ್ಯವಾಸಿ । ನಗವ ಬೆರಳತುದಿಯಲೆತ್ತಿ ।

ಜಗದ ಲಜ್ಜೆಯು ತೋರಿದ ಕಲ್ಕಿಯು ॥ ೨ ॥ ಮಿಡಿದು ತೊಳಿವ ಚಂಚಲ ಚಿತ್ತ । ಕಡು ಕಠಿನದ ದೇಹದವನ । ಹಿಡಿವ ರೋಮಮಯ ಶರೀರ । ಕಿಡಿಯನುಗುಳ್ವ ನಯನದವನಾ ॥ ಬಿಡದೆ ದಾನ ಬೇಡಿ ಕೊಡಲಿ । ಪಿಡಿದು ವ್ಯಾಧನ ಧನುವ ಮುರಿದು । ಜಡಿದು ಅಗ್ರಪೂಜೆಗೊಂಡ । ಕಡು ನಿರ್ವಾಣ ಹಯವದನನ್ನಾ ॥ ೩ ॥ ಶ್ರೀ ॥

## ೫೯. ರಾಗ ಕೇದಾರಗೌಳ, ಅಟತಾಳ.

ನಿನ್ನ ದಾಸರ ದಾಸನೆಂತಹನೈ । ಕೃಷ್ಣಾ । ಅನ್ನಂತ ಅಪರಾಧಕರ್ತ್ರ ಕರದವನೂ ॥ ಪಲ್ಲ ॥ ಅರುಣೋದಯವ ಜರಿದು । ಆಹ್ನಿಕಕರ್ಮವ ತೊರೆದು । ಪೊರೆವ ನಿನ್ನಡಿಯ ಮರೆದು । ಧರೆಗೆಲ್ಲ ಬಾಯದೆರೆದು । ದೈನ್ಯದಲಿ ಹಲ್ಕಿರಿದು । ಮರ್ಯಾದೆಗೆಟ್ಟು ತಿರಿದೂ । ಇರುಳುಹಗಲೆನ್ನದೆ । ಈವಿಧದಿ ಹೊಟ್ಟೆಯ ಪೊರೆದು । ಇದು ಪುಣ್ಯಪಾಪವೆಂದರಿದೂ ಅರಿದರಿದು ॥ ೧ ॥ ಜಟ್ಟಿಗಳ ಮನೆಯ ನಾಯಂತೆ ಒಳಗೆ ಹೊರಗೆ । ಕೊಟ್ಟವರ ಹಿಂದೆ ತಿರುಗಿ । ಅಟ್ಟುಂಡು ಬಾಳಬದುಕಿದ ತಮ್ಮ ಹಿರಿಯರನು । ಕೆಟ್ಟು ಮುರಿದುದನು ಪೇಳಿ । ಉಟ್ಟ ಅರಿವೆಯ ತೋರಿ । ಹೊಟ್ಟೆಬಾಯನೇ ತೋರಿ । ಕೊಟ್ಟುದಕೆ ತುಷ್ಟನಾಗದೆ ಅವರ ಬೈವವನೂ ॥ ೨ ॥ ವೃತ್ತಿಯಿಲ್ಲದೆ ಶೂದ್ರವೃತ್ತಿಗಳನನುಸರಿಸಿ ಅ । ಕೃತ್ಯಶತಗಳನ್ನು ಮಾಡಿ । ಸತ್ಯಶೌಚವ ಬಿಟ್ಟು ಶ್ರವಣಮನನದ ಪ್ರ । ಸಕ್ತಿಗಳ ಹೋಗಲಾಡಿ । ಉತ್ತಮರು ತಾಯಿತಂದೆ ಗುರುಹಿರಿಯರುಗಳ ಅರ್ಥಗಳನಪಹರಿಸಿ । ಅವರ ನಿಂದಿಸುವವನೂ ॥ ೩ ॥ ಪರ್ವ ಉಪರಾಗ ದ್ವಾದಶಿ ಅಯನಗಳಲ್ಲಿ । ಸರ್ವ ವಿಹಿತಗಳ ಮಾರಿ । ಉರ್ವಿಯೊಳಗುಳ್ಳ ಯೋಗ್ಯರನೆಲ್ಲ ಹಳಿದೆನ್ನ । ನಿರ್ವಾಹಗಳನೆ ತೋರಿ । ದುರ್ವಿಚಾರದಿ ಸ್ವಲ್ಪತನಕಾಗಿ ಯೆನ್ನೊಳಿಹ । ಪೂರ್ವಸಂಚಿತ ಮಂತ್ರ ತುಚ್ಛರಿಗೆ ಮಾರೀ ॥ ೪ ॥ ಛಲ ಚಾಡಿ ಡಂಭ ಮಿಥ್ಯಾಜ್ಞಾನ ದುರ್ವಿಷಯ । ಕುಲಸತಿಯ ಕೂಡೆ ಕಲಹ । ಕಳವು ಕಠಿನೋಕ್ತಿ ದುಷ್ಟಾನ್ನ ಭೋಜನ । ಮದುವೆಗಳ ಮುರಿವ ಪಾಪಚಿಂತೆ । ಹಳಿವ ಹರಿವಾಸರಕ್ಕೆ ವ್ರತಭಂಗನಾಗಿ । ಹಯವದನಹರಿಯನು ಮರೆತು । ಹಾಳುಹರಟುವ ನಾನೂ ॥ ೫ ॥ ಶ್ರೀ ॥

## ೬೦. ರಾಗ ಆನಂದಭೈರವಿ, ಆದಿತಾಳ.

ಎನ್ನ ಹೊಲು ಕೇಳಬಾರದೇ । ಸ್ವಾಮಿ ನಿನಗೆ ॥ ಎನ್ನ ಮೊರೆಯು ಲಾಲಿಸಲಾಗದೇ । ಪ್ರ । ಸನ್ನ ವೇಲಾಪುರದಲಿಪ್ಪ ಚನ್ನಕೇಶವರಾಯ ನಿನಗೆ ॥ ಪಲ್ಲ ॥ ಪಾಲುಗಡಲ ಮಧ್ಯದಲಿ । ಏಳು ಸುತ್ತಿಲೆಸೆವ ಕೋಟೆ । ನೀಲಮಾಣಿಕ್ಯ ವಜ್ರಗಾರೆ । ಮೇಳವಿಸಿದ ಸಜ್ಜೆಗೃಹಕೆ ॥ ಮೇಲೆ ಶೇಷ ನೊರೆಗು ಹಾಸಿಗೆ । ಬಾಲೆ ರುಗ್ಮಿಣಿಯೊಳು ಸಲ್ಲಾಪನೆ । ಸಾಮಗಾನ ಲೋಲ ಸುತ್ತ ವೇದಘೋಷಣೆ ॥ ೧ ॥ ಸುತ್ತಲೆಸೆವ ಸನಕಾದಿಗಳು । ಮೊತ್ತದಿಂದ ದೇವತೆಯರು । ಮತ್ತೆಯೂರ್ವಶಿ ಮೇನಕೆ ರಂಭೆ । ನೃತ್ಯ ಗೀತ ಪಾಡುತಿರಲು । ಸುತ್ತ ಸುರರ ದುಂದುಭಿ ವಾಲಗ । ಕತ್ತರಿಸುವ ಆಸುರರೊಡಲ ಕಡಿವ ಕಾಳಗಾ । ಭಕ್ತಜನರಿಷ್ಟಾರ್ಥವನ್ನು ಕೊಡುವ ಊಳಿಗಾ ॥ ೨ ॥ ಮುನ್ನ ಈ ಭಾಗ್ಯವೆಲ್ಲಿ ಇನ್ನು ಇಲ್ಲ ಸ್ವಾಮಿ । ಬನ್ನಬಟ್ಟು ದ್ರುಪದಕನ್ನೆ । ನಿನ್ನನೊದರೆ ಅಕ್ಷಯವಿತ್ತೆ । ಸನ್ನೆಯಿಂದ ನಕ್ರನ ಕೊಂದು ಗಜವ ಸಲಹಿದೇ । ನಿನ್ನ ಪಟ್ಟಣಕ್ಕೆ ಅಜಾಮಿಳನ್ನ ಕರೆಸಿದೆ । ಚೆನ್ನ ಹಯವದನ್ನ ಎನ್ನ ನೀನು ಸಲಹಲಾಗದೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೧. ರಾಗ ಶ್ರೀರಾಗ, ಅಟತಾಳ.

ದಿವ್ಯಸಾಲೆನ್ನಿ ಚಕ್ಕ । ತವ್ಯಗಳಿರ ಗೊಲ್ಲತೆರ ॥ ಹವ್ಯರ್ ಪ್ರೊಕ್ತ ಆವರ ಮುಡಿ । ಪೆರ್ಮೆಯಿಂದ ಭಸ್ಮಸೂಸಿ ॥ ಪಲ್ಲ ॥ ಶಂಖನಾದ ಕೊಳಲು ಭೇರಿ । ಪೊಂಕದಿ ಪಂಚ ಮಹಾವಾದ್ಯದಿ ॥ ಅಂಕ ವತ್ಸಲನ ನಿರಾತಂಕದಿಂದ ಹಿರಿವ ಬನ್ನಿ ॥ ೧ ॥ ಎರಳೆಗಣ್ಣಿನ ಬಾಲೆಯರುಗಳಿಂ । ಹರುಷದಿಂದ ಬಂದು ನಿಂತು ॥ ವರದ ಕೇಶವನ ಮೇಲೆ । ಪರಿದು ಸೂಸಿ ಭಸ್ಮವಾ ॥ ೨ ॥ ಮತ್ತೆ ಕುಶಲದ ಬಾಲೆಯರುಗ । ಳಿತ್ತೆರದಲಿ ಬಂದು ನಿಂತು ॥ ಚಿತ್ತಜನಯ್ಯನ ಮೇ । ಲೆತ್ತಿ ಸೂಸಿ ಭಸ್ಮವಾ ॥ ೩ ॥ ಗಂಧ ಕಸ್ತೂರಿ ಪುಣುಗು । ಚಂದದಿಂದ ಲೇಪಮಾಡಿ ॥ ನಂದಗೋಪ ಸುತನ ಮೇಲೆ । ತಂದು ಸೂಸಿ ಭಸ್ಮವಾ ॥ ೪ ॥ ವಾದಿರಾಜಗೊಲಿದು ಬಂದು ।

ಸೋದೆಪುರದಲಿ ನಿಂದು । ಮೋದ ಹಯವದನ್ನ ಮೇಲೆ । ಪರಿದು ಪೂಜಿ ಭಸ್ಮವಾ ॥ ೫ ॥ ಶ್ರೀಃ ॥

### ೬೨. ರಾಗ ಪಂತುವರಾಳಿ, ಏಕತಾಳ.

ಭಕುತರಪರಾಧವ ಬಗೆಯ ನೀ ದೇವಾ । ಭಕುತರು ತಪ್ಪಿದರೆ ಒಲು ಭಯವೀವಾ ॥ ಪಲ್ಲ ॥ ಇಟ್ಟಣಿಸಿದ ಬಲಿಕಟ್ಟಿದಳು ಯಶೋದೆಗೆ । ಇಷ್ಟಾರ್ಥಗಳನಂದು ಕೊಟ್ಟು ಕಾಯನೆ ॥ ದುಷ್ಟತನದಿ ಧೃತರಾಷ್ಟ್ರ ತನಯ ತನ್ನ । ಕಟ್ಟಲು ಹವಣಿಸೆ ಕಷ್ಟವನುಣಿಸನೆ ॥ ೧ ॥ ಕಾಲಿಲಿ ತನ್ನ ಅಂಗವನೊದ್ದ ಮುನಿಪನ । ಮೂಲೋಕವರಿಯೆ ಮುದ್ದಿಸಿ ಮರೆಯನೆ ॥ ತಾಳದೆ ನೃಪತಿಯು ತಾನೆಂದು ತಿಳಿಯಲು । ಕಾಲಯವನ ಬಂದು ಕಾಳು ಮಾಡಿಸನೆ ॥ ೨ ॥ ಪರವಶಚಿತ್ತನಾಗಿ ಫಲುಗುಣ ಜರೆಯಲು ಹರಿ ಮಾರಾಗದೆ ಹರಣವ ಕಾಯನೆ ॥ ಅವನೆಂಬ ಗರ್ವದಿಂದ ಅರಭಟ ಪೌಂಡ್ರಕನ । ಧುರಕೆ ಗುರಿಯ ಮಾಡಿ ಧುರದಿ ಕೊಲಿಸನೆ ॥ ೩ ॥ ಶರಕೆ ಗುರಿಯ ಮಾಡಿ ಸಮರದೊಳೊದ್ದಿದ ಸುರವ್ರತಗಂದು ಶುಭವನೀಯನೆ ॥ ಹರನ ಮೆಚ್ಚಿಸಿ ತನ್ನ ಗೆಲುವ ಬಿಲ್ಲ ಬೇಡಿದ । ಶಾರೀರ ಸಂಬಂಧಿಯ ಕೊಲ್ಲಿಸನೆ ॥ ೪ ॥ ಮುಕುಟವ ಕದ್ದೊಯ್ಯಲು ಮಹಾಬಲಿಯ ಬಾಗಿಲ । ಅಕಳಂಕನಂದು ಕಾವುದ ಬಿಟ್ಟನೆ ॥ ಈ ಕೃಷ್ಣ ಹಯವದನ ನಿಂದುಡುಪಿನ ಜನಕೆ । ಶೋಕವಿತ್ತ ಕಳ್ಳನಿಗೆ ಶೂಲಗತಿ ನೀಯನೇ ॥ ೫ ॥

### ೬೩. ರಾಗ ಶ್ರೀರಾಗ, ಅಟತಾಳ.

ಉತ್ಸವದಲ್ಯಾಹ್ನಿಕವಾ ಕಡು ಜನರು ಕೇಳಿರಯ್ಯ ॥ ಪಲ್ಲ ॥ ಅರುಣ ಉದಯದೊಳೆದ್ದು ಆ ದ್ವಾರಪಾಲಕರು । ಭರದೆ ಘಂಟೆ ಸುಪಿಷ್ಟ ಮಾಡೆ । ತರತರದ ಹರಿದಾಸರೂ ತಾಳಮೇಳಗಳಿಂದ । ಪರಿಪರಿಯ ಗಾನ ಪಾಡೆ ತ್ವರಿತವಾದ್ಯಗಳಿಂದ ॥ ತರುವಾಯ ಭೋರಿಡೆ ಮುರಹರನು ಪವಡಿಸೆ । ತರುಣ ಯತಿಗಳು ಯೆದ್ದು ಸ್ನಾನಜಪಗಳ ಮಾಡಿ । ನಿರುತ ಶಂಖಭ್ರಮಣೆ ಮಾಡೆ ನೀಟಾಗಿ । ಒಪ್ಪುತಿಹ ಉಡುಪಿಯಾ ಶ್ರೀಕೃಷ್ಣನ ॥ ೧ ॥ ಚಂದವುಳ್ಳ ನಿರ್ಮಾಲ್ಯ ಚಾತುರ್ಯದಿ ವಿಸರ್ಜಿಸಿ ಆ । ನಂದ

ಸುತಗಭಿಷೇಕವಾ । ಚಂದದಿಂದಲಿ ಮಾಡಿ ಆ ರಮ್ಯ ಬಾಲ ಉಡಿಗೆ
ಶ್ರೀ । ಗಂಧ ತುಳಸಿ ಮಾಲೆಯರ್ಪಿಸಿ ॥ ಇಂದಿರೇಶಗೆ ಬೇಗ ಇಂಬಾದ
ಹರಿವಾಣದಿ । ಇಂದು ಘೃತ ನೆನೆಕಡಲೆಯೂ । ಶುದ್ಧಾದ ಪಾಲ್ಕೊಸರು
ಶುಂಠಿ ಸಕ್ಕರೆ ಲಡ್ಡಿಗೆ । ತಂದ ನೈವೇದ್ಯವ ಸವಿದು ತಾ ಪೂಜೆ ಮಾಡಿಸಿ
ಕೊಂಬ ॥ ೨ ॥ ಪದ್ಮನಾಭಗೆ ಬೇಗ ಪುರುಷಸೂಕ್ತದಭಿಷೇಕ । ಮುದ
ದಿಂದ ಮಾಡಿದ ಬಳಿಕಾ । ವಿಧಿಯು ಪೂರ್ವಕವಾಗಿ ಅಗಿಲುಗಂಧ ತುಳಸಿ
ಮಾಲೆ । ಅಧಿಕವಾಗಿ ಸಮರ್ಪಿಸಿ ಮದ ॥ ಗಿಡ್ಡ ಶುಂಠಿ ಬೆಲ್ಲ ಒಳಿತಾದ
ಅನ್ನ ಸೂಪ । ದಧಿ ಕ್ಷೀರ ಕದಳಿಫಲವೂ ಮುರಮರ್ದನನು । ಚೆಲುವ ತಾ
ಹಂಸಪೂಜೆಯಕೊಂಬ ತದನಂತ । ರದಲಿ ವೃತ್ತಿಗೆಯು ತಾ ಗಣೆಯು
ಕಟ್ಟಿಸಿಕೊಂಬ ॥ ೩ ॥ ಗುರುರಾಯ ಪುರಾಣವನು ಗುಪಿತಾರ್ಥದಲಿ
ಕೇಳಿ । ಹರಿಯ ಮಂದಿರಕೆ ಪೋಗಿ ತರುವಾಯ ಘೃತ । ಕ್ಷೀರ ತಂದು
ದಧಿ ದಿವ್ಯ ಮಧು ಸಕ್ಕರೆ ಸೀಯಾಳವೂ ಇಂ । ದಿರೇಶಗೆ ಬೇಗ ಶಿರದ
ಮೇಲ ॥ ಭಿಷೇಕ ಮುದದಿಂದ ಮಾಡಿದ ಬಳಿಕ । ತಿರುಗಿ ನೈವೇದ್ಯವನು
ಶೀಘ್ರದಿಂದಲೆ ಸ । ಮರ್ಪಿಸಿ ಚೆಲುವ ಮಂಗಳಾರತಿಯಿಂದ । ಪಂಚಾ
ಮೃತದ ಪೂಜೆಗೊಂಬ ॥ ೪ ॥ ಜಲಜನಾಭಗೆ ಉಷ್ಣಜಲವ ತಂದ್ಹದ
ಮಾಡಿ । ಲಲಿತವಾಗಿ ಎರೆಯುತಾ । ಒಳಿತಾದ ಪೆಸರ್ಹಿಟ್ಟಿನಲಿ ಮರಳಿ ಮೈ
ಯನೆ । ತೊಳೆದು ಸುಲಭಗೆ ಶಾಲನುಡಿಸಿ ಬಳಿಕ ॥ ಬಾಲ ಉಡಿಗೆಯಿಟ್ಟು
ಬಹು ನೈವೇದ್ಯವನರ್ಪಿಸಿ । ಚೆಲುವ ಉದ್ವಾರ್ಚನೆಪೂಜೆ । ಚಂದಾಗಿ
ಮಾಡಿಸಿಕೊಂಬ ॥ ೫ ॥ ಮಧ್ವಸರೋವರಜಲವು ತೊಳೆವ ಚಿನ್ನಕಲಶ
ದಲಿ । ಶುದ್ಧದಲಿ ಶೋಧಿಸೀ ತುಂಬಿಸಿ । ಬದ್ಧ ಘಂಟೆನಾದದಲಿ ಬಹು ಬೇಗ
ದಲಿ । ಬಂದು ಸನ್ನಿಧಿಯಲಿ ಪೂಜಿಸಿರಿಸೀ ॥ ವಿಧುರಧನೆ ಶಂಕರಥನೆ
ಪುರುಷಸೂಕ್ತದಭಿಷೇಕ । ಮುದದಿಂದ ಮಾಡಿದ ಬಳಿಕಾ ಸಜ್ಜಿ ಘೃತ ।
ದೋಸೆ ಬೆಣ್ಣೆ ಸಾರು ನೈವೇದ್ಯವಾ ಸವಿದೂ ಚೆಲುವ । ಮಂಗಳಾರತಿ
ಯಿಂದ ಮುದದಿ ತೀರ್ಥಪೂಜೆಗೊಂಬ ॥ ೬ ॥ ಉರುಪದಕಾಭರಣಂಗಳೂ
ಉನ್ನಂತ ತೋಳ್ ಬಂದಿ । ಕರಮುದ್ರೆ ಕಂಕಣಗಳೂ । ಚರಣಾರವಿಂದ
ಗಳಿಗೆ ಛಾರು ಚಿನ್ನದ್ಹಾವಿಗೆ । ಕಿರುಗೆಜ್ಜೆ ಕಾಲಲಂದುಗೆ ॥ ವರ ಪೀತಾಂ

ಬರ ಕಟ್ಟಿಗೆ ವಡ್ಯಾಣ ನೇವಳ ಇಟ್ಟು । ಸಿರುತ ಸುವರ್ಣದ ಕವಚವು । ಕೊರಳ ಕೌಸ್ತುಭಹಾರ ಕೋಮಲ ಸುವರ್ಣಕುಂಡಲ । ಶಿರಿಮೂಗುತಿ ಸಣ್ಣ ನಾಮಾಶಿರದ ಜಾವಳ ಜಡೆ ಕಡಗೋಲುಸೇಣಿಸಹಿತ ॥ ೭ ॥ ಕರದಲ್ಲಿ ಪಿಡಿದಿಪ್ಪಗೆ ಒಡೆ ಶಿಕುನುಂಡೆ ಹಪ್ಪಳ । ವಡೆಯುಗೋವನ ನೈವೇದ್ಯ । ಒಳಿತಾದ ಅನ್ನ ಸೂಪ ತಡೆಯದಾಲಂಕಾರಪೂಜೆ ತಾಗೊಂಡು । ತೀವ್ರಪೂಜೆ ಸಡಗರದಿಂದ ಮಾಡಿ ಪರಮ ಸಂಭ್ರಮದಲೊಪ್ಪುವ ॥ ಪರಿಮಳದ ಗಂಧ ತುಲಸಿ ಪರಮಾತ್ಮಗರ್ಪಿಸಿ । ಉರದಿ ಧೂಪದೀಪವತ್ತಿ । ತರತರದ ಪಚ್ಚಡಿಗಳು ತಳಿಲುಪೀಕರಣೆಯೂ । ಕರದ ತುಪ್ಪದ ಅಪೂಪವೂ ಚಿತ್ರಾನ್ನ ದಧ್ಯನ್ನ ಪಂಚಕಜ್ಜಾಯ ಕಲಸೋಗರ ಬಿಡದೆ ಪರಮಾನ್ನಗಳನೂ ಸೊಗಸುಳ್ಳ ಕ್ಷೀರ ದಧಿ ಶುಂಠಿ ಪಿಂಬೆರಸ ತಕ್ರ । ಜಗದೇಕ ಸವಿದ ಪರಿಯೂ ॥ ೮ ॥ ಒಗೆಬಗೆಯ ಮಂಗಳಾರತಿ ಛಾರಿಛಾರಿಗೆ ಮಾಡಿ ಚಾ । ಮರ ದರ್ಪಣಗಳೆಸೆಯೆ ನಗೆಮುಖದ ಕೃಷ್ಣ । ನಂಘ್ರಿಗೆ ಷೋಡಶ ಪೂಜೆಯ ಮಾಡಿ । ಮುಗಿಸಿ ಗುರುರಾಯ ಬರಲೂ ॥ ಹನುಮಂತದೇವರಿಗೆ ಹಸನಾದ ಭಕ್ಷ್ಯಭೋಜ್ಯ । ಅನುದಿನ ದಲರ್ಪಿಸಿ ಪೂಜಿಸಿ । ಮುನಿ ಮಧ್ವರಾಯರಿಗೆ ಮುದದಿಂದಲರ್ಪಿಸಿ ॥ ೯ ॥ ಘನ ಸಿಂಹಾಸನಕೆ ಪೋಗಿ । ಅಣಿಯಾದ ಫಲನೈವೇದ್ಯ । ಆ ವ್ಯಾಸಗರ್ಪಿಸಿ ಒಂದನೇ ಮಂಗಳಾರತಿ ಎತ್ತಿ । ಜನಕೆ ತೀರ್ಥಪ್ರಸಾದ ಜಾಗ್ರತೆಯಿಂದಲಿ ಮಾಡಿ ಭೋ । ಜನವ ಮಾಡಿಸಿ ಊರೇಳು ಜಗದ ಕೀರ್ತಿಯೊಳಿಸೆವಾ ॥ ಆ ಭಾಗವತರು ತಾವು ಆ ಬೆಳ್ಳಿಕೋಲುಗಳನೆ । ಬೇಗದಲಿ ಪಿಡಿದು ನಿಂತೂ । ಆರು ಹೆಡಿಗೆಯ ಅರಳು ಆ ಅಚ್ಚಿಬೆಲ್ಲವೂ । ಆಕಾಲದಲರ್ಪಿಸಿ ಪೂಜಿಸಿ ಕರಣದಲಿ ನೋಡಿ ನಗುವಾ ॥ ೧೦ ॥ ಪುಟ್ಟ ಕೃಷ್ಣರಾಯರಿಗೆ ಹೊನ್ನ ಕವಚವ ತೊಡಿಸಿ । ಇಟ್ಟ ರನ್ನದ ಕಿರೀಟವೂ । ದಿಟ್ಟಾದ ಪದಕಂಗಳೂ ದಿವ್ಯ ಮುತ್ತಿನ ಸರ । ಕಟ್ಟಿದ್ದ ಪೂಮಾಲೆಯೆಸೆಯೆ । ಶ್ರೇಷ್ಠವಾದ ಧೂಪ ದೀಪಶ್ರೀಪತಿಗೆ ದೋಸೆ ಬೆಣ್ಣೆ । ಗಟ್ಟ್ಯಾರುಳ ನೈವೇದ್ಯವೂ ಕಟಕಟನೆ । ಶುಂಠಿಕಷಾಯುಂಡು ಬಾಯಿ ತೊಳೆದು ತಟ್ಟನೇ ರಾತ್ರಿಪೂಜೆಯಗೊಂಡು ತಾ ಪಲ್ಲಕ್ಕಿ ಯೇರಿ ಬರುವಾ ॥ ೧೧ ॥

ವ್ವೋಲಗದ ಮಂಟಪಕೆ ವೈಭೋಗದಲಿ ಬಂದು ಉ । ಯ್ಯಾಲೆಯಲಿ ಮುದದಿ ಕುಳಿತೂ ॥ ಬಹಳ ಪಾನಕಾ ಅರಳು ಬಹು ಕೊಬರಿಚೂರುಗಳು ಆ । ಕಾಲದಲಿ ಸೂಸಿ ಪೂಜಿಸಿ ಕರುಣದಲಿ ನೋಡಿ ನಗುವಾ ॥ ॥ ೧೨ ॥ ಧೀರನಿಗೆ ಚತುರ್ವೇದ ದಿವ್ಯ ಶಾಸ್ತ್ರ । ಪುರಾಣ ಚೆಲುವಗಷ್ಟಕ ಗೀತವೂ । ಭೇರಿಮೌಳೀ ಮೌಳಿವಾದ್ಯ ಮೌಳೀ ಮೌಳೀ ಚಕ್ರವಾದ್ಯ । ತಾರತಮ್ಯದ ಸರ್ವವಾದ್ಯಗಳಿಸೆಯು । ತಾರಿಸೇವೆಯು ಮಾಡಿ ಸ್ವಾಮಿ ವೀಳ್ಯ ಮಂತ್ರಾಕ್ಷತೆ ಕಾರುಣ್ಯದಲಿ । ಬೆರಸಿ ಮಾರಜನಕಗೆ ಏಕಾಂತ ಸೇವೆಯು ಮಾಡಿ ನವ । ಮಾರಜನಕನ ಹಂಸಪೂಜೆಯು ಜಾಗ್ರತೆಯಲಿ ನೋಡಿ ನಗುವಾ ॥ ೧೩ ॥ ಹಡಗಿನಿಂದಲಿ ಬಂದು । ಕಡಲ ತಡಿಯಲಿ ನಿಂದು । ಬಿಡದೆ ಯತಿಗಳ ಕೈಯು ಬಿಂಕದಿ ಪೂಜೆಗೊಂಬ । ಆದಿ ಕೃಷ್ಣನ ಆಹ್ನಿಕವನು ಆಧಾರದಲಿ । ಓದಿ ವಿನೋದದಲಿ ಪಠಿಪ ಜನರಿಗೆ । ಆಧಿವ್ಯಾಧಿಗಳಟ್ಟಿ ಬಹು ಭಾಗ್ಯಗಳ ಕೊಡುವ ॥ ಮಾಧವನ ಕೃಪೆಯಿಂದಲೀ । ವಾದಿರಾಜರಗೊಲಿದು ವಚನ । ಶುದ್ಧೋಕ್ತದಲಿ ಹೇಳುವ ಜನರಿಗೆ ಬರುವ ದುರಿತವ ಕಳೆದು । ಮೇಲಾಗಿ ರಕ್ಷಿಸಿಕೊಂಬ ಹಯವದನ ॥ ೧೪ ॥

### ೬೪. ರಾಗ ಕಾಂಬೋಧಿ, ಝಂಪೆತಾಳ.

ಕಂಜಾಕ್ಷ ಕಾಯಯ್ಯ ಕರುಣಾನಿಧಿಯೇ । ಬಲ । ಭಂಜನನನುಜ ನೋಡೆನ್ನ ॥ ಪಲ್ಲ ॥ ಅಂಜದೆ ನಾ ನಿನ್ನ ಅಡಿಗಡಿಗೆ ಬೇಡುವೆನು । ಕುಂಜರ ವರದ ಕೂಡೆನ್ನಾ ॥ ಅನುಪಲ್ಲ ॥ ನೀನೊಲಿದಾಗಲೆ ನಿಖಿಲ ಸಂಪದವೆಲ್ಲ । ತಾನೆ ಬಾಹದು ತಡವಿಲ್ಲಾ ॥ ಆ ನಳಿನ ಭವಾದ್ಯಮರರಿದಕೆ ಸಾಕ್ಷಿ । ಭಾನುಸನ್ನಿಭ ಬಾರೊ ನಲ್ಲಾ ॥ ೧ ॥ ಪುಂಡರೀಕಾಕ್ಷನ್ನ ಪೂಜಿಪಾ ಭಕ್ತರ । ಮಂಡೆಯ ಪೂ ಬಾಡದೆಂದು ॥ ಕಂಡೆನಾ ರಣದಲ್ಲಿ ಕಲಿಪಾರ್ಥನಿಗೊಲಿದು । ಭಂಡಿಯ ಬೋವನಾದಂದು ॥ ೨ ॥ ವೃಂದಾರಕೇಂದ್ರ ಶ್ರೀಹಯವದನ ಮುಕುಂದ । ಮಂದರೋದ್ಧಾರ ಮತ್ತೊಂದರಿಯೇ ॥ ಇಂದಿರೆಯರಸ ಬಾ ಇಂದುವದನ ದೀನ । ಬಂಧುವೆ ಭಕ್ತರ ಸಿರಿಯೇ ॥ ೩ ॥

ಶ್ರೀಃ ॥

## ೬೫. ರಾಗ ಭೈರವಿ, ಅಟತಾಳ.

ಭೀಮಸೇನ ಭಾಮಿನಿಯಾದನು ॥ಪಲ್ಲ॥ ಭೀಮಸೇನ ಭಾಮಿನಿಯಾಗಲು। ಪ್ರೇಮದಸಲಿಯ ಕಾಮಿಸಿದವನ॥ ನೇಮದಿ ಕೊಲ್ಲುವರ ಝಾಮರಾತ್ರಿಗೆಂದು । ಸಾಮಜವರದನ ಪಾಡುತಲಿ॥ ಅನುಪಲ್ಲ॥ ರಾಜಾಧಿರಾಜನು ಗಜಪುರದಲ್ಲಿ। ಜೂಜನಾಡಿ ತಮ್ಮ ರಾಜ್ಯವನ್ನು ಸೋತು। ವಿಜಯ ಮುಖ್ಯ ಅನುಜರೊಡಗೂಡ। ಭುಜಂಗಶಾಯಿಯ ಭಜಿಸುತಾ। ಪೂಜಿಪೊನೆಯಷ್ಟು ಗೋಜಿಲ್ಲದೆ ಬೇರೆ ವ್ಯಾಜ್ಯದಿಂದ। ಕಾಯ ಮಾಜಿಕೊಂಡು ಪುರಿಗೆ। ರಾಜಮತ್ಸ್ಯನೊಳು ಭೋಜನ ಮಾಡುತ। ಪೂಜಿಸಿಕೊಂಬುದು ಸೋಜಿಗವೆ ॥ ೧ ॥ ಮಾನಿ ದ್ರೌಪದಿ ಆ ಶ್ರೇಣಿಯೊಳು ಬರುತಾ । ತ್ರಾಣಿ ವಿರಾಟನ ರಾಣಿಯು ಕಾಣುತಾ । ಧ್ಯಾನಿಸಿ ಯಾರೆಂದು ಮನ್ನಿಸಿ ಕೇಳಲು। ಮುನ್ನಿನ ಸಂಗತಿ ಪೇಳಿದಳು। ಆಣಿಮುತ್ತಿನಂಥ ವಾಣಿಯ ಕೇಳಲು । ಕ್ಷೋಣಿಲಿ ನಿನ್ನಂಥ ಜಾಣೆಯ ಕಾಣೆನು । ಪ್ರಾಣಿ ನೀಯೆನಗೆ ವೇಣಿ ಹಾಕೆನುತಾ । ಪಾಣಿ ಪಿಡಿದು ಕರತಂದಳಾಗ ॥ ೨ ॥ ಈಶ ಕೇಳೋ ಪರದೇಶದಿಂದೊಬ್ಬಳು । ಕೇಶ ಕಟ್ಟಿದಂಥ ವೇಷದಿ ಬಂದಳು । ಸಾಹಿರಮುಖದ ಶೇಷನವರೂಪ । ಲೇಶವು ವರ್ಣಿಸಲರಿಯನು ವಾಸಮಾಡುವೆನು। ಮಾಸವೆರಾರೆಂದು ಗ್ರಾಸವು ಕೊಟ್ಟೆನ್ನಾ ಪೋಷಿಸಬೇಕೆಂದು । ಶಾಸನ ಪೇಳಲು ವಿಲಾಸಿ ತಿರುವುತ। ವಿಲಾಸಲಿನಗೊಂದು ತೋಷಿಸಿದಾ ॥ ೩ ॥ ನಾರಿಯುಕ್ಕಗಲ್ಲಿ ನೇರಿಕೊಂಡಿಹಳು । ಮೋರೆಯ ನೋಡಲು ಭಾರಿ ಗುಣದಂತೆ। ತೋರುತದೆ ಯೆನ್ನ ಸೇರಿದ ಮೇಲಿನ್ನು । ಜಾರ ಯೆನಿಸುವೆ ಮೀರಿದಕ್ಕೆ। ಓರಿಗಣ್ಣಿಲ್ಯೊಂದುಸಾರೆ ನೊಡಲೆಂದು । ಭಾರಿ ಭಾರಿ ಯಾಕೆ ಮೋರೆ ನೋಡುತಿರೆ। ನೀರೆ ಆ ಕ್ರೂರನ ಘೋರ ರೂಪಕಂಜಿ । ಮೋರೆ ತೋರದೆ ಗಂಭೀರಾಧರೆ ॥ ॥ ೪ ॥ ಅಕ್ಕನಿಗೆ ಬಾಚಿ ಹಿಕ್ಕುವ ಸೇವೆಗೆ । ಪುಕ್ಕಟ್ಟೆ ಅನ್ನಕ್ಕೆ ಸಿಕ್ಕಿವಳೆ ನೀನು । ಚಿಕ್ಕ ಪ್ರಾಯಕೆನ್ನ ಪಕ್ಕಗೆ ಬಂದರೆ । ಸಕ್ಕರೆದುಟಿಸವಿದಕ್ಕಿಸುವೆ॥ ರಕ್ಕಸ ನಿನಗೆ ದಕ್ಕುವಳೆ ನಾನು। ಮುಕ್ಕಣ್ಣಗಾದರು ಲೆಕ್ಕಿಸದಾ। ಪತಿ । ಗಕ್ಕನೆ ಬಂದರೆ ತಿಕ್ಕಿ ನಿನ್ನ ಕಾಯೊ । ದಿಕ್ಕು ದಿಕ್ಕಿಗೆ ಬಲಿ

ಯಿಕ್ಕುವರೋ ॥ ೫ ॥ ಭಂಡಾ ಕೀಚಕನು । ದ್ದಂಡಾತಾನಾ ಕೇಳು । ಷಂಡೆ ಹಿಕ್ಕುವಳೆಂದು । ಕಂಡ ಕಂಡ ಬಳಿ ಪುಂಡುಮಾಡುವನು । ಗಂಡ ಕಂಠರೆ ತಲೆ । ಚಂಡನಾಡುವನು ಖಂಡಿತದೀ ॥ ಮಂಡಲಾಧಿಪನಾ ಹೆಂಡತಿ ನೀನಮ್ಮಾ । ಉಂಡಮನೆ ಹಗೆ । ಗೊಂಡಳೆನದಿರು ಲಂಡನಿಗೆ ಬುದ್ಧಿ ದಂಡಿಸಿ ಪೇಳದೆ । ಹಿಂಡಿಕೊಳ್ಳಾದಿರು ದುಂಡುಮುಖೀ ॥ ೬ ॥ ತರಳ ನಿನ್ನಯ ದುರುಳತನದಾ । ಬೆರಳ ಸನ್ನೆಯು ಗರಲವಾಯಿತು । ಸರಳ ಗುಂಡಿಗೆ ಕೊರಳ ಕೊಡದೆ ಊರೊಳಗಿರದೆ ತೆರಳೋ ನೀ ॥ ಅರಳಮೊಗ್ಗಿಯಾ ಹೆರಳಿಗ್ಹಾಕಿದಾ । ಕುರುಳುತಿದ್ದುವಾ ತರಳೆಯು ಕಂಡು ಇರುಳು ಹಗಲು ಬಾರಾಳು ಎನ್ನುತಾ । ಮರುಳುಗೊಂಡರೆ ಬರುವಳೇ ॥ ೭ ॥ ನಿಷ್ಠೆ ಸೈರಂಧ್ರಿಯಾ (ಸ್ತ್ರೀರಂದ್ರಿಯು) ದೃಷ್ಟಿಸಿ ನೋಡಲು । ನಷ್ಟವಾಗುವದು ಅಷ್ಟ ಐಶ್ವರ್ಯವು । ಭ್ರಷ್ಟ ನಿನಗೆ ನಾನೆಷ್ಟು ಪೇಳಲಿನ್ನು । ಕಟ್ಟಕಡೆ ನೀನು ಕೆಟ್ಟೆ ಕಂಡ್ಯಾ ॥ ಸೃಷ್ಟಿಲಿ ನನ್ನಂಥಾ ಘಟ್ಟಿಗನ್ಯಾರಕ್ಕ । ದುಷ್ಟರಾ ಯೆದೆಯು ಮೆಟ್ಟಿ ಸೀಳುವೆನು । ಗುಟ್ಟಿಂದ ನಾರಿಯಾ ಕೊಟ್ಟು ಕಳುಹಲು । ಪಟ್ಟದಾ ರಾಣಿಯೊಲಿಟ್ಟುಕೊಂಬೆ ॥ ೮ ॥ ಕೀಚಕನಾಡಿದ ನೀಚ ನುಡಿ ಕೇಳಿ । ನಾಚಿ ಪತಿಯೊಳು ಮಾಚಿಸಬೇಕೆಂದು ಯೋಚಿಸಿ ಸುಮ್ಮನೆ । ಈಚೆ ಬರುತ ನಿ । ಶಾಚರಕರವ ಚಾಚಿದನು । ಬಾಚಿ ಹಿಕ್ಕುವಂಥ ಪ್ರಾಚೀನವೇನಿದು । ವಾಚವಾಡುವಿಮಾನಲೋಚನೆ ಯೆನ್ನೊಳು । ಆಚರಿಸಿ ಮುಂದೆ ತೋಚದೆ ಖಳನ । ವಿಚಾರಿಸಿ ಕೊಳ್ಳೊ ಶ್ರೀಚಕ್ರಪಾಣೀ ॥ ೯ ॥ ಪೊಡವಿಪತಿಯಾ ಮಡದಿ ನಾನಾಗಿ । ಬಡತನ ಬಂದೊದಗುದಿತೆಂದು ನಾಡಧೊರಿಗಳ ಬೇಡೂವದಾಯಿತು । ಮಾಡುವದೇನೆಂದು ನುಡಿದಳು । ಕೇಡಿಗ ಕೀಚಕ । ಮಾಡಿದ ಚೇಷ್ಟೆಗೆ । ಕಡಲಶಾಯಿ ಕಾಪಾಡಿದ ಎನ್ನನು । ಆಡಲಂಜುವೆನು ಷಡ್ರಸಾನ್ನಭಕ್ಷ್ಯಾ । ಅಡಿಗೆ ರುಚಿಯು ನೋಡುವರೆ ॥ ೧೦ ॥ ನಡುಗುವೊ ಧ್ವನಿ ಬಿಡುತ ಕಣ್ಣೀರಿಂ । ದಾಡುವ ಮಾತನು ಬಾಡಿದ ಮುಖವು । ನೋಡಿದನಾಕ್ಷಣಾ । ತೊಡದು ನೇತ್ರವು । ಬಿಡು ಬಿಡು ದುಃಖಮಾಡದಿರು । ಪುಡುಕಿ ನಿನ್ನನು ಹಿಡಿವವನನ್ನು ಬಡಿದು ಯಮನಿಗೆ ಕೊಡುವೆ ನೋಡೀಗ । ತಡವ ಮಾಡದೆ

ಗಾಢದಿ ಪೋಗು ನೀ ಮಾಡಿದ್ಯೋಚನೆ ಕೈಗೂಡಿತೆಂದು ॥ ೧೧ ॥ ಮೋಸ ಮಾಡಿ ಪೋದಳಾ ಶಶಿಮುಖಿಯು । ಆಶೆ ಬಿಡದೆ ತಾ ವ್ಯಸನಗೊಳುತ । ಪೂಶರತಾಪಕೆ ಕೇಸರಿಗಂಧವು ದಾಸಿಯರೊಡನೆ ಪೂಸಿಕೊಂಡು ॥ ಹಾಸು ಮಂಚದಲ್ಲೆ ಬೀಸಿಸಿಕೊಳ್ಳುತ್ತಾ ಘಾಸಿಯಾಗುತಿರೆ ಆ ಸಮಯದಲ್ಲಿ । ಲೇಸಾಗಿ ನಿನ್ನಭಿಲಾಷೆ ಸಲಿಸುವೆ ಸಂಶಯ ಮಾಡದೆ । ಭಾಷೆ ಕೊಟ್ಟೆ ॥
॥ ೧೨ ॥ ನಳಿನಮುಖಿಯು ಪೇಳಿದ ಮಾತನು । ಕೇಳಿ ಹರುಷವಾ ತಾಳಿದನಾಕ್ಷಣ । ಖಳನು ಪೊನ್ನಿನಾ ಝೋಳಿಯ ತೊಟ್ಟು । ಸುಳಿಯಾದೆ ರತಿಕೇಳಿಗಿನ್ನು ॥ ಕಾಳಗದಾ ಮನೆಯೊಳಗೆ ಬಾಯೆಂದು । ಪೇಳಿದ ಸುಳುವು । ಕೇಳಲು ಭೀಮನು ಹೇಳಲು ಖಳನ । ಕಾಯುವ ಶೀಳುವ ವೇಳೆ ಬಂತೆನುತಾ । ತೋಳಹೊಯ್ದಾ ॥ ೧೩ ॥ ನಾರಿ ಇನ್ಯಾವಾಗ । ಬರುವಳೊ ಎಂದು । ದಾರಿಯ ನೋಡುವ । ಘೋರ ಕೀಚಕನು ತೋರಿದ ಠಾವಿಲಿ । ಸೇರುವ ಬೇಗನೆ । ಊರೊಳಗ್ಯಾರು ಅರಿಯದಂತೆ ॥ ಕ್ರೂರನು ಮೋಹಿಪಾ ತೆರದಿ ಎನಗೆ । ನಾರಿಯ ರೂಪ ಶೃಂಗಾರಿಸು ನೀನೆಂದು । ವಾರಿಜಮುಖಿಯ ಮೋರೆ ನೋಡಲು । ನೀರೆ ದ್ರೌಪದಿ ತಾ ನಾಚಿದಳು ॥
॥ ೧೪ ॥ ಬಟ್ಟು ಮುಖಕೆ ತಾನಿಟ್ಟಾಳು ಸಾದಿನಾ । ಬೊಟ್ಟು ಫಣಿಯಾಲಿಟ್ಟು ಕಣ್ಣಾ ಕಪ್ಪು । ಪಟ್ಟೆ ಪೀತಾಂಬರನುಟ್ಟುಕೊ ನೀನೆಂದು । ಪುಟ್ಟಾಣಿ ಕುಪ್ಪುಸಾ ಕೊಟ್ಟಾಳಾಗ । ಕಟ್ಟಾಣಿ ಮುತ್ತು ತಾ ಕಟ್ಟಿ ಕೊರಳಿಗೆ । ಘಟ್ಯಾಗಿ ಚಿನ್ನದಾ ಪಟ್ಟೆಯುಡುದಾರಾ ಧಿಟ್ಟಾನ ಬೆರಳಿಗಿಟ್ಟಾಳು ಉಂಗುರವಿಟ ಪುರುಷರು ದೃಷ್ಟಿಸಂತೆ ॥ ೧೫ ॥ ಮುತ್ತಿನ ಮೂಗುತಿ ಕೆತ್ತಿದ ವಾಲೆಯು । ಇತ್ತರಾಬುಗುಡಿ । ನೆತ್ತಿಗರಳೆಲೆ ಚಿನ್ನದ ರಾಕುಟೆ । ಉತ್ತಮ ಕೇತಕಿ ಪೊತ್ತಿಲಿ ಶಾವಂತಿಗ್ಹಾಗೊಂಡ್ಯಾ । ಹಸ್ತಕಡಗವು ಮತ್ತೆ ಜೂಡ್ಯಾ ವಂಕಿ ಮುತ್ತಿನ ಹಾರವು ರತ್ನದ ಪದಕಾ । ಆರ್ತಿಲಿ ನಾರಿಯಾ ಕುತ್ತಿಗೆಗ್ಹಾಕುತ । ಹಸ್ತಿನೀಯೊ ಈಕೆ ಚಿತ್ರಿಣಿಯೋ ॥
॥ ೧೬ ॥ ಮುಡಿಗೆ ಮಲ್ಲಿಗೆ ಮುಡಿಸಿ ಗಂಧವ ತೊಡದು ತಾಂಬೂಲ । ಮಡಿಸಿ ಕೊಡುತ ಪ್ರೌಢನಾ ಸ್ತ್ರೀರೂಪಾ । ನೋಡಲು ಖಳನು । ಕೊಡದೆ ಪ್ರಾಣವ ಬಿಡನೆಂದಳು । ಮಾಡಿದ್ಯೋಚನೆ ಕೈಗೂಡಿತು ಇಂದಿಗೆ ।

ನೋಡಿ ಆ ಕೃಷ್ಣನು ಹೂಡಿದ ಆಟವು। ಮಡದಿ ನೀ ಯೆನ್ನ ವಡನೆ ಬಾ
ಯೆಂದು । ನಡದಾರು ಖಳನಾ ಬಿಡದಿಗೆ ॥ ೧೭ ॥ ಇಂದುಮುಖಿ ಅರ
ವಿಂದನಯನದ । ಮಂದಗಮನೆಯು ಬಂದಳು ಎನ್ನುತಾ । ನಂದನಾ
ಸುತನಾ ಕಂದನಾ ಬಾಧೆಗೆ । ಕಂದಿ ಕುಂದಿ ಬಹು ನೊಂದೆನೆಂದಾ ॥
ಹಿಂದಿನ ಸುಕೃತದಿಂದಲಿ ನಿನ್ನೊಳು । ನಂದವಾಗಿಹೊದು ಇಂದೀಗೆ
ಕೂಡಿತು । ಕುಂದಣದಾಭರಣಾ ತಂದೆ ನಿನಗಾಗಿ । ಚಂದದಿಂದಿಟ್ಟು ನೀ
ನಂದಾವಾಡೆ ॥ ೧೮ ॥ ಗುಲ್ಲುಮಾಡದಿರೊ ಮೆಲ್ಲಗೆ ಮಾತಾಡೊ । ವಲ್ಲಭ
ಕರ್ಂಡರೆ ಹಲ್ಲು ಮುರಿವರೊ । ಬಲ್ಲವನಿನಗೆ ಸಲ್ಲಾದು ಈ ಕಾರ್ಯ
ಗೆಲ್ಲಲಾರಿಯೊ ನೀ ಕೊಲ್ಲಿಸಿಕೊಂಬೇ ॥ ಚಲ್ವೆ ಕೇಳೇ ನಿನ್ನಾ । ಹುಲ್ಲ
ಗಣ್ಣಾ ನೋಟ ಗೆಲ್ಲುವ ಬಗೆಗೆ ಗೆಲ್ಲಲಾರೆನೆಂದು । ಗಲ್ಲ ಮುದ್ದಿಟ್ಟು ವೈಯ
ಲ್ಲಾ ಹುಡುಕಲು । ಕಲ್ಲ್ಯಟ್ಟಿಯೋಲಿರೆ । ಖೂಳನೊಂದಾ ॥ ೧೯ ॥ ನಾರೀಯೊ
ನೀನೇನು । ಮಾರೀಯೊ ಇನ್ನೊಂದು । ಭಾರಿ ನೀ ಯೆನಗೆ । ಮೋರೆಯು
ತೋರೆಂದು ಧೀರನ ಸಮೀಪ । ಬಾರದೆ ಓಡುವಾ । ದಾರಿಯು ನೋಡು
ತಲಿರಲಾಗಾ । ಬಾರದಂಥಾ ಪರದಾರರ ಸೋಹಿಪಾ । ಕ್ರೂರಗೆ ಈ ರೂಪ
ಘೋರವಾಗಿಹುದು । ಸಾರಾದ ಮಾತೀದು । ಯಾರಾದರೆ ನಿನಗಾ । ಮಾ
ರನಾ ತಾಪಾ ಪರಿಹರಿಸೂವೆ ॥ ೨೦ ॥ ಶುದ್ಧಾ ಹೆಣ್ಣೆಂದು ಪ್ರಸಿದ್ಧವಾಗಿ
ಹ ಎನ್ನಾ । ವಿದ್ಯೆಯು ನಿನಗೆ । ಸದ್ಯಕೆ ತೋರುವೆ । ನಿದ್ರೆಯುಗೆಡುವ ।
ಬುದ್ಧಿಯು ನಿನ್ನದು । ಸದ್ದುಮಾಡದೆ ಬಂದು ಮುದ್ದಿನೆನ್ನಾ ॥ ಬದ್ದಾವೊ
ಏನೆಂದು ಬದ್ದಿಗ್ಗೆ ಪೋಗಲು । ಎದ್ದು ಸಮೀರಜಾ । ಗುದ್ದಲು ಕೀಚಕಾ ।
ಬಿದ್ದನು ಭೂಮಿಲಿ । ಗೆದ್ದೆನೆನುತ ಆನಿ । ರುದ್ಧನ್ನ ಸ್ಮರಿಸುತಲಿದ್ದಾ ಭೀಮಾ ॥
॥ ೨೧ ॥ ಕೆಟ್ಟ ಕೀಚಕ ತಾ । ತೊಟ್ಟ ಛಲದಿಂದಾ । ಬೆಟ್ಟದಂಥ
ದೇಹ ಬಿಟ್ಟ ಇನ್ನವನಾ । ಘಟ್ಟ್ಯಾಗಿ ತೋರಲು ದೃಷ್ಟಿಸು ಎನ್ನಲು ।
ಭ್ರಷ್ಟನ ನೋಡುವುದೇನೆಂದಳು ॥ ಕೊಟ್ಟ ಭಾಷೆ ಯಾಗ ಮುಟ್ಟಿತು
ನಿನಗೆ । ಕೃಷ್ಣನ ದಯದಿಂದಾ । ಕಷ್ಟವು ಹಿಂಗಿತು । ಪಟ್ಟಣಕೀ ಸುದ್ದಿ
ಮುಟ್ಟಿದ • ಮುಂಚಿಗೆ ಗುಟ್ಟಲೆ ಪೋಗುವ ಧಟ್ಟನೆಂದಾ ॥ ೨೨ ॥ ಅರಸಿ
ನಿನ್ನೊಳು । ಸರಸ ಬೇಕೆಂದಾ । ಪುರುಷನಾ ಜೀವ ವರಿಸಿ ಕೊಂದೆನು ।

ಹರುಷ ಯಿಾ ಪುರ । ದರಸು ನಮ್ಮನು । ಇರಿಸಿಕೊಂಡೊಂದ್ವರುಷವಾಯಿತು । ಬೆರಸಿದ ಸ್ನೇಹಾ । ವಿರಸ ಬಂತೆಂದು ಸರಸಿಜಾಕ್ಷಿಯು ಕರಿಸಿ ಸಿನ್ನೊಳ । ಗಿರಿಸದಿದ್ದರೆ । ಹಯವದನನ್ನಾ ಸ್ಮರಿಸಿ ಗದೆಯಾ ಧರಿಸುವೆ ॥ ೨೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೬. ರಾಗ ಕಾಂಬೋಧಿ, ಝಂಪೆತಾಳ.

ಎದ್ದು ನಿಂತ ಖಳರ ಕೃತಾಂತ । ಹೊದ್ದಿದವರ ಪೊರೆವ ಧವಳಗಂಗೆ ಹನುಮಂತ ॥ ಪಲ್ಲ ॥ ಕಂಜಾಕ್ಷಿಯನು ಕಂಡು ಕಪಟ ದಶಮುಖ ಮದ ಪ್ರ । ಭಂಜನ ಮಹಾಮಹಿಮ ತಾನೆದ್ದು ನಿಂತ ॥ ಸಂಜೀವನವ ತಂದು ಸಕಲ ಕಪಿಗಳ ಕಾಯ್ದ । ಅಂಜನೆಯ ಕುವರ ತಾನೆದ್ದು ನಿಂತ ॥ ೧ ॥ ಗುದ್ದಿ ರಾವಣನ ಧರೆಯೊಳು ಕೆಡಹಿ ಅರಿಕಟಕ । ಮರ್ದನ ಮಹಾಮಹಿಮ ತಾನೆದ್ದು ನಿಂತ ॥ ಯುದ್ಧದಲಿ ರಘುಪತಿಯ ಹೊದ್ದು ತಾಳಿದ ಮಹಾ । ಶುದ್ಧಸ್ವಭಾವ ತಾನೆದ್ದುನಿಂತ ॥ ೨ ॥ ರಾಗಗಳ ಮೇಳೈಸಿ ಹಯವದನನೊಲಿಸಿ । ಯೋಗಿಗಳನುದ್ಧರಿಸಲೆಂದೆದ್ದು ನಿಂತ ॥ ಈಗ ಧರೆಯೊಳು ಸುಜನರ ಮನೋಭೀಷ್ಟಗಳ । ವೇಗದಲಿ ಕೊಡುವೆನೆಂದೆದ್ದು ನಿಂತ ॥ ೩ ॥ ಶ್ರೀಃ ॥

## ೬೭. ರಾಗ ಮುಖಾರಿ, ಝಂಪೆತಾಳ.

ಆರ ಮಗನೆಂದರಿಯನೆ । ಇವನಮ್ಮ । ಕೇರಿಯೊಳು ಸುಳಿದು ಪೋದ ॥ ಪಲ್ಲ ॥ ನೀಲವರ್ಣದ ಮೈಯ್ಯವ ತುಳಸಿಯ ಮಾಲೆ ಕೊರಳಲ್ಲಿ ಕೌಸ್ತುಭ ॥ ಬಾಲಪ್ರಾಯದ ಚೆನ್ನಿಗ ಬಂದನೆ ಪೂಗೊಳಕೆ ಸನ್ನೆಯ ಮಾಡಿದ ॥ ೧ ॥ ಚಿಕ್ಕಪ್ರಾಯದ ಚೆನ್ನಿಗ ಯೌವನದ ಯುವತಿಕಡು ಚೆಲುವನೆ ॥ ಚೊಕ್ಕಟದನಲ್ಲನವ್ಯ ಕುಚಕೆ ಕೈಯಿಕ್ಕಿ ಕಸ್ತೂರಿ ಪೂಸಿದಾ ॥ ॥ ೨ ॥ ಪೀತಾಂಬರವನುಡಿಸಿದ ಪ್ರೀತಿಯಿಂದಲಿ ॥ ತನ್ನ ಚಂದುಟಿ ಅಧರಾಮೃತವನುಣಿಸಿದಾ ॥ ೩ ॥ ಪಾರಿಜಾತವ ಮುಡಿಸಿದ ಕೈಗೆ ನೀರು ಗಂಧವ ಹಚ್ಚಿದ । ದೂರದಲಿ ನಿಂತು ತನ್ನ ಸೋಗೆಗಣ್ಣ ವಾರೆನೋಟದಿ ನೋಡಿದ ॥ ೪ ॥ ಅಗಮೊದಲಾದತನುಕಾಮನಶರ ತಾಕಿ ಕಟ್ಟು

ಡಿದೆವಮ್ಮ ॥ ಬೇಗದಲಿ ಬಂದು ಯೆನ್ನ ಹಯವದನ ಪ್ರೇಮದಲಿ ಕೂಡಿದಾ ॥೫॥ ಶ್ರೀಃ ॥

೬೮. ರಾಗ ಕಾಂಬೋಧಿ, ಝಾಪುತಾಳ.

ಹಣವೇ ನಿನ್ನಯ ಗುಣ ಯೇನು ಬಣ್ಣಿಪೆನಿಂದು ॥ ಪಲ್ಲ ॥ ಹಣ ವಿಲ್ಲದವನೊಬ್ಬ ಹೆಣವೇ ಸರಿ ಕಂಡ್ಯಾ ॥ ಅನುಪಲ್ಲ ॥ ಬೆಲೆಯಾಗದನೆಲ್ಲ ಬೆಲೆಯ ಮಾಡಿಸುವಿ । ಎಲ್ಲಾ ವಸ್ತುಗಳ ನೀನಿದ್ದಲ್ಲಿ ತರಿಸುವಿ ॥ ಕುಲಕೆಟ್ಟ ವರನೆ ಸತ್ಕುಲಕೆ ಸೇರಿಸುವಿ । ಹೊಲೆಯುನಾದರು ತಂದೊಳಗಿರಿಸುವಿ ॥೧॥ ಅಂಗನೇಯರ ಸಂಗ ಅತಿಶಯ ಮಾಡಿಸುವಿ । ಶೃಂಗಾರದಾಭರಣ ಬೇಗ ದಲಿ ತರಿಸುವಿ ॥ ಮಂಗನಾದರು ಅವನನಂಗನೆಂದೆನಿಸುವಿ । ಕಂಗಳಿಲ್ಲದವ ನಿಗೆಮಗಳಾನೆ ಕೊಡಿಸುವಿ ॥೨॥ ಚರಣಕ್ಕೆ ಬಂದಂಧ ದುರಿತವನೆ ಬಿಡಿಸು ವಿ । ಪರುವರಿಗೆ ಶ್ರೇಷ್ಠ ನರನಾ ಮಾಡಿಸುವಿ ॥ ಅರಿಯದಾ ಶುಂಠನ ಪರಮ ಜ್ಞಾನಿಯೆನಿಸುವಿ । ಸಿರಿಹಯವದನನ ಸ್ಮರಣೆಯನೆ ನೀ ಮರೆಸುವೀ ॥೩॥

೬೯. ರಾಗ ಮುಖಾರಿ, ಅಟತಾಳ.

ಭಾಗ್ಯವಂತನು ಯಿನ್ನು ಯಾರಯ್ಯಾ ॥ ಪಲ್ಲ ॥ ಯೋಗ್ಯ ವೈಷ್ಣವ ಕುಲದ ಭಾಗವತನಲ್ಲದೆ ॥ ಅನುಪಲ್ಲ ॥ ಚತುರನೆನಿಸಿ ಲಕ್ಷ್ಮ ಮನೆಮನೆ ತಿರಿಗಿದೆ । ಚತುರಾನನ ಮಾತು ಅನುಸರಿಸಿದೆ ॥ ಸತುಚಿತು ಆನಂದ ಆತ್ಮಹರಿ ಪ । ಪ್ರೋರ್ತ್ತಮನ ದಾಸರ ದಾಸ ಯೆಂಬುವನಲ್ಲದೆ ॥೧॥ ತಾರತಮ್ಯ ಪಂಚಭೇದವನೆ ತಿಳಿದು ಶ್ರೀ । ಮಾರುತನ ಮತಗಳೀ ಹಾರೈಸುತಾ ॥ ಕರ್ಮ ವಂಚನೆ ಇಲ್ಲದನುದಿನದಿ ಮಾಡುತ । ಚರಿ ಸುತಾ ಸಂಚಿತಾಗಾಮಿ ಕಳೆವನಲ್ಲದೆ ॥೨॥ ಪತಿತಪಾವನ ಶ್ರೀಹರಿಗುರು ಗಳನು ಮೋದದಿ । ಕ್ಷಿತಿಯೊಳಗೆ ಭಜನೆಯೇ ಧನವೆನ್ನುತಾ ॥ ಅತಿಶ ಯದಿ ಶೇಷಾದ್ರಿ ಹಯವದನನ್ನ ನೆನೆನೆನೆದು । ಪ್ರೀತಿಯಿಂದಲಿ ಭಜಿಸುವ ವನಲ್ಲದೇ ॥೩॥ ಶ್ರೀಃ ॥

೭೦. ರಾಗ ಮೋಹನ, ಝಂಪೆತಾಳ.

ಹೇಗೆ ಕೊಟ್ಟನು ಹೆಣ್ಣ ಸಾಗರನು ಈ ವರಗೇ ॥ ಪಲ್ಲ ॥ ಶೃಂಗಾ ರಪುರುಷರು ಬಹುಮಂದಿ ಯಿರಲು ॥ ಅನುಪಲ್ಲ ॥ ಗುಪ್ಪು ನಾರುವ

ವ್ಯೆಯ್ಯಿ ಬಿಟ್ಟಿದ್ದ ಬಿರುಗಣ್ಣು । ಮುಟ್ಟಿ ನೋಡಿದರೆವ್ಯೆಯು ಅತಿಕಠಿನವೂ ॥ ಹೊಟ್ಟೆ ಮೋರೆಯು ಇವಗೆಎಷ್ಟುದ್ದ ಹಲ್ಲುಗಳು । ಇಷ್ಟು ಘೋರವಮುಖದಳಿಯನೆಲ್ಲಿ ದೊರಕಿದನೋ ॥ ೧ ॥ ಬಡವನು ಭಿಕ್ಷುಕನು ಬಡಬನಂದದಿ ಕೋಪ । ನೋಡಿದರೆ ತಲೆಜಟೆಯು ಕಟ್ಟಿಹನವನು ॥ ಬೆಡಗು ನುಡಿಗಾರ ಜಾರಚೋರನಿಗೆ । ನೋಡಿ ನೋಡಿ ಹೆಣ್ಣು ಹೇಗೆ ಕೊಟ್ಟನೂ ॥ ೨ ॥ ಭಂಡನಾಗಿವನು ಕಂಡವರೊಡನೆ ಕಾಳಗವ । ಕೊಂಡು ಬಾಹು ಬಲುಉದ್ದಂಡನಿವನೂ ॥ ಅಂಡಜವಾಹನಗೆ ಯೋಗ್ಯವಾದಾ ಹೆಣ್ಣು । ಕಂಡು ಕಂಡಿಹ ಹಯವದನಗೆ ಕೊಟ್ಟನ್ಯಾಗೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೭೧. ರಾಗ ಯಮುನಾಕಲ್ಯಾಣಿ, ಅಟತಾಳ.

ಶ್ರೀರಂಗ ಬಾರನೇ । ಕರದರಲ್ಲಿ ಬಾರನೆ । ಕಾಂತೆ ಮುಖವ ತೋರನೆ ॥ ಪಲ್ಲ ॥ ಮುನಿಸು ಮನದಲಿಟ್ಟನೆ । ಮೋಹವನ್ನು ಬಿಟ್ಟನೆ । ಮನದಿ ಛಲವ ತೊಟ್ಟನೆ । ಮನೆಗೆ ಬಾರದೆ ಬಿಟ್ಟನೆ ॥ ೧ ॥ ಎಂತು ನಂಬಿ ಇದ್ದನೆ । ಎಂತು ಗುರುತು ಮರತನೆ ॥ ಹಂಥವೇತಕೆ ಕಲಿತನೆ । ಕಾಂತೆರ ಕೂಡಿ ಮೆರೆದನೆ ॥ ೨ ॥ ಸೋಳ ಸಾಸಿರ ಗೋಪಿಸಹಿತ । ಜಲದಲಾಡಿ ಪೋದನೆ । ಸೆಳೆದು ಪೊಟ್ಟಳ ವ್ಯೆದನೆ । ಚೆಲುವ ಹಯವದನನೆ ॥ ೩ ॥ ಶ್ರೀಃ ॥

೭೨. ರಾಗ ಕಾಂಬೋಧಿ. ಝಂಪೆತಾಳ.

ಈ ಮುದ್ದು ಕೃಷ್ಣನಾ ಈಕ್ಷಣದ ಸುಖವೆ ಸಾಕು ॥ ಗುರುಮಧ್ವಮುನಿ ಮನದ್ಯೆವ ಉಡುಪಿನಾ ॥ ಪಲ್ಲ ॥ ಚೆಲುವ ಚರಣದ್ವಂದ್ವ ಜಂಘೆ ಜಾನೂರು ಕಟೀ । ವಳಿಪಂಕ್ತಿ ಜಠರ ವಕ್ಷಕಂಬುಕಂಧರದೀ ॥ ನಳಿತೋಳ ಮುದ್ದು ಮುಖ ನಯನನಾಸಿಕೆ ಕರ್ಣ । ಸುಳಿಗುರುಳು ಮಸ್ತಕದ ನಳಿನನಾಭನ ಸೊಬಗೂ ॥ ೧ ॥ ಕಿರಿಗೆಜ್ಜೆ ಕಡಿಪೆಂಡೆ ಘಂಟಾ ಕಟಿಸೂತ್ರ । ವರ ಹಾರ ಪದಕ ಶ್ರೀವತ್ಸ ಕೌಸ್ತುಭರತ್ನಾ ॥ ಉರುಮುದ್ರೆ ಕಂಕಣಾಂಗದ ಕುಂಡಲ ಪ್ರಭೆಯು । ಸಿರಿನಾಮ ಮುಕುಟ ನಾಸಿಕದ ಮಣಿಯೂ ॥

॥ ೨ ॥ ಸಕಲ ದೇವೋತ್ತಮನೆ ಸರ್ವ ಗುಣಪರಿಪೂರ್ಣನೆ । ಅಕಳಂಕ ಸುರನುತನೆ ಅಪ್ರಾಕೃತನೆ ॥ ಅಖಿಳ ಜೀವೋತ್ತಮರ ಭಿನ್ನ ಹಯವದನನೆ । ಮುಕುರ ಕಡಗೋಲು ನೇಣುಸಹಿತ ಪಿಡಿದಿಪ್ಪನೆ ॥ ೩ ॥ ಶ್ರೀ ॥

### ೭೩. ರಾಗ ಧನಾಸಿ, ಅಟತಾಳ.

ಹೋಗುತಿದೆ ಹೊತ್ತು ಬರಿದೆ ವ್ಯರ್ಥವಾಗಿ । ಶ್ರೀಹರಿಗುರುಗಳ ನಿಮ್ಮನು ಸ್ಮರಿಸದೆ ॥ ಪಲ್ಲ ॥ ನರರ ನಾನೂರ ಮೂವತ್ತೆರಡು ಕೋಟಿ । ವರುಷ ವೊಂದೆ ದಿನ ಬೊಮ್ಮಗೆ ॥ ಪರೀಕ್ಷಿಸಲು ಬ್ರಹ್ಮಕಲ್ಪ ಸಾಸಿರ ಕೋಟಿ । ನರಕದೊಳಗೆ ಬಿದ್ದು ಮರಳಿ ಭವಕೆ ಬಂದೆ ॥ ೧ ॥ ಒಂದೊಂದಕೆ ಇಪ್ಪತ್ತವೊಂದು ಲಕ್ಷದ ಯೋನಿ । ಎಂದೆನಿಸುವ ಸ್ವೇದಜ ಅಂಡಜ ॥ ಬಂದು ಜರಾಯುಜ ದ್ವಿಜಕುಲದಿ ಪುಟ್ಟಿ । ಬಂದೆ ಎಂಭತ್ತನಾಲ್ಕು ಲಕ್ಷ ಯೋನಿಯಲಿ ॥ ೨ ॥ ಮಾಸ ಒಂಭತ್ತು ಮಾತೆಯ ಗರ್ಭನರಕದಿ । ಹೇಸದೆ ಬಂದು ಜೀವಿಸಿ ಬಳಲಿ ॥ ದೋಷವನರಿಯದೆ ಮುನ್ನ ಮಾಡಿದ ಕರ್ಮ । ಘಾಸಿಯಾದೆನೊ ಯೌವನಮದದಿಂದ ನೊಕ್ಕೀ ॥ ೩ ॥ ಕೆಲಹೊತ್ತು ಚತುರಂಗ ಪಗಡೆ ಆಟಗಳಿಂದ । ಕೆಲಹೊತ್ತು ಹಸಿವು ನಿದ್ರೆಗಳಿಂದಲೀ ॥ ಕೆಲಹೊತ್ತು ಕಾಕಪೋಕರ ಕಥೆಗಳಿಂದ । ಕೆಲಹೊತ್ತು ಪರನಿಂದೆ ಪರವಾರ್ತೆಗಳಿಂದ ॥ ೪ ॥ ಕಾಲವ ಕಳೆದೇನೊ ಹರಿ ನಿಮ್ಮನರ್ಚಿಸೆ । ವೇಳೆಯಿಲ್ಲದೆ ಹೊತ್ತು ಬಂಜೆಯಾಗಿ ॥ ಜಾಲಿಸಿ ಹೋಗುತಿದೆ ಯಿಾಗ ಹೊತ್ತು ಬೇಗನೆ । ಪಾಲಿಸಿ ದಯಮಾಡೊ ಶ್ರೀಹಯವದನನೇ ॥ ೫ ॥ ಶ್ರೀ ॥

### ೭೪. ರಾಗ ಯಮುನಾಕಲ್ಯಾಣಿ, ತ್ರಿಪುಟತಾಳ.

ಕಾವುದೆಮ್ಮನು ಜಗವ ಕಾವ ಕರುಣಿಯೆ । ಈವುದೆಮಗೆ ಸಕಲ ಸುಖವ ದೇವ ಲಕುಮಿನಾರಾಯಣಾ ॥ ಪಲ್ಲ ॥ ಕಮಲಕರ್ಣಿಕೆ ಮಧ್ಯದಲಿ । ವಿಮಲವಿಹಂಗಪತಿಯ ಶಿರದಿ ॥ ಕಮಲನಾಭನ ಬಿಡದೆ ಪೂಜಿಪ । ಅಮರಕುಲಲಲಾಮ ವಿಭುವೆ ॥ ೧ ॥ ಮಧ್ವಮುನಿಯ ಕರಗಳಿಂದೊ । ಪದುಮದಿಂದ ಪೂಜಿತಚರಣಾ ॥ ಗೆದ್ದು ಕುಜನ ತತಿಯ ಸುಜನ । ರುದ್ಧರಿಸುವ ಗುಣನಿಧಿಯೆ ॥ ೨ ॥ ಶಂಖ ಚಕ್ರ ಗದಾ

ಪದುಮ । ಅಂಕಗಳಿಂದ ಶೋಭಿತ ಕರ ॥ ಪಂಕಜಾಕ್ಷ ಪಯೋಧಿಶಯನ । ಶಂಕೆಯಿಲ್ಲದೆ ಹಯವದನನೇ ॥ ೩ ॥ ಶ್ರೀಃ ॥

## ೭೫. ರಾಗ ಕಾಪಿ, ಆದಿತಾಳ.

ರಂಗ ಬಾರೋ ನರಸಿಂಗ ಬಾರೋ ಮೋಹನಾಂಗ ಬಾರೊ । ಅಂಗಜನಯ್ಯ ಕೋನೇರಿ ತಿಮ್ಮ ರಂಗ ಬಾರೋ ॥ ಪಲ್ಲ ॥ ಶಾಶ್ವತಮೂರುತಿ ವಾಸವವಂದ್ಯನೆ । ನಾಸಿರನಾಮದೊಡೆಯನೆ ॥ ನಾಸಿರನಾಮದೊಡೆಯಾನೆ ನರಹರಿ । ಕೇಶವ ನಮ್ಮ ಮನದೈವಾ ॥ ೧ ॥ ಕಾರುಣ್ಯಮೂರುತಿ ವಾರಣವಂದ್ಯನೆ । ಪುರಾಣಂಗಳೆಲ್ಲ ಪೊಗಳುವ ॥ ಪುರಾಣಂಗಳೆಲ್ಲ ಪೊಗಳುವ ನರಹರಿ । ನಾರಾಯಣ ನಮ್ಮ ಮನದೈವಾ ॥ ೨ ॥ ಯಾದವಕುಲದೇವ ಸಾಧುಗಳರಸಾನೆ । ವೇದಂಗಳೆಲ್ಲ ಪೊಗಳುವ । ವೇದಂಗಳೆಲ್ಲ ಪೊಗಳುವ ನರಹರಿ । ಮಾಧವ ನಮ್ಮ ಮನದೈವಾ ॥ ೩ ॥ ದೇವೇಂದ್ರ ಮಳೆಗರೆಯೆ ಗೋವರ್ಧನಗಿರಿಯೆತ್ತಿ । ಆವಾಗ ಶ್ರೀಕೃಷ್ಣ ಕೊಡೆಮಾಡಿ ॥ ಆವಾಗ ಶ್ರೀಕೃಷ್ಣ ಕೊಡೆಮಾಡಿ ಕಾಯ್ದನೆ । ಗೋವಿಂದ ನಮ್ಮ ಮನದೈವಾ ॥ ೪ ॥ ಸೃಷ್ಟಿಗೆ ಕರ್ತನೆ ದುಷ್ಟಕಂಸನ ಗೆಲಿದು । ಸೃಷ್ಟಿ ಪರಿಪಾಲಕನೆನಿಸಿದಾನೆ ॥ ಸೃಷ್ಟಿಗೆ ಪತಿಪಾಲಕನೆನಿಸಿದಾನೆ ನರಹರಿ । ವಿಷ್ಣುವೆ ನಮ್ಮ ಮನದೈವಾ ॥ ೫ ॥ ಮಧುವೆಂಬೊ ದೈತ್ಯನ ಮುದದಿಂದ ಗೆಲಿದಾನೆ । ಎದುರನ ಮನೆಯಲಿ ನಲಿದುಂಡ ॥ ಎದುರನ ಮನೆಯಲಿ ನಲಿದುಂಡ ನರಹರಿ । ಮಧುಸೂದನ ನಮ್ಮ ಮನದೈವಾ ॥ ೬ ॥ ಚಕ್ರವ ಪಿಡಿದನೆ ಭೂಚಕ್ರವ ಗೆಲಿದಾನೆ । ಅಕ್ರೂರನೊಡನೆ ಮಧುರೆಗೆ ॥ ಅಕ್ರೂರನೊಡನೆ ಮಧುರೆಗೆ ಪೋದ ತ್ರಿ । ವಿಕ್ರಮ ನಮ್ಮ ಮನದೈವ ॥ ೭ ॥ ಸಾಮವನೋದುತ್ತ ಭೂಮಿಯ ಬೇಡುತ್ತ । ನಾಮಾದ ಮಹಿಮೆ ಘನಘನ ॥ ನಾಮಾದ ಮಹಿಮೇ ಘನಘನ ನರಹರಿ । ವಾಮನ ನಮ್ಮ ಮನದೈವ ॥ ೮ ॥ ಯಾದಾವಪತಿಯಾದ ಶ್ರೀವತ್ಸಲಾಂಛನ । ಮೋದಿತ ಗೋಪಿತನಯನೆ ॥ ಮೋದಿತ ಗೋಪಿತನಯನೆ ನರಹರಿ । ಶ್ರೀಧರ ನಮ್ಮ ಮನದೈವ ॥ ೯ ॥

ಋಷಿಜನ ವಂದ್ಯನೆ ಕುಸುಮನಾಭನೆ ದೇವ। ದಶರಥಗಭಯವ ಕೊಡುತಿರ್ದ॥ ದಶರಥಗಭಯವ ಕೊಡುತಿರ್ದ ನರಹರಿ। ಹೃಷಿಕೇಶ ನಮ್ಮ ಮನದೈವ ॥ ೧೦ ॥ ಪದುಮ ಸಂಭವಪಿತ ಪದುಮಾಕ್ಷ ದಾಮೋದರ। ಪೊಗಳಿದರಭಯವ ಕೊಡುವವನೆ॥ ಪೊಗಳಿದರಭಯವ ಕೊಡುವವನೆ ನರಹರಿ। ಪದುಮನಾಭನೆ ನಮ್ಮ ಮನದೈವ ॥ ೧೧ ॥ ನಾಮದ ಮಹಿಮೆಯ ಪ್ರೇಮದಿ ಪೊಗಳಲು। ಕಾಮಿತಾರ್ಥಗಳ ಕೊಡುವವನೆ॥ ಕಾಮಿತಾರ್ಥಗಳ ಕೊಡುವವನೆ ನರಹರಿ। ದಾಮೋದರ ನಮ್ಮ ಮನದೈವ ॥ ೧೨ ॥ ಸಂಕಟಗಳ ತರಿದವನೆ। ಪಂಕಜಲೋಚನನೆ॥ ಸಂಖ್ಯೆಯಿಲ್ಲದಸುರರ ಕೆಡಹಿದ್ಯೊ। ಸಂಖ್ಯೆಯಿಲ್ಲದಸುರರ ಕೆಡಹಿದೆ ನರಹರಿ ಸಂಕರ್ಷಣ ನಮ್ಮ ಮನದೈವ ॥ ೧೩ ॥ ವಸುದೇವತನಯನೆ ಅಸಮಸಾಹಸನೆ। ತ್ರಿಪುರರ ನಾಶವಮಾಡಿದನೇ ॥ ತ್ರಿಪುರರ ನಾಶವಮಾಡಿದ ನರಹರಿ। ವಾಸುದೇವ ನಮ್ಮ ಮನದೈವ ॥ ೧೪ ॥ ಶುದ್ಧ ಸ್ವರೂಪನೆ। ಶುದ್ಧ ಭಕ್ತರನು ಸಲಹಯ್ಯ। ಹದ್ದುವಾಹನನಾದ ದೇವನೇ॥ ಹದ್ದುವಾಹನನಾದ ದೇವನೇ ನರಹರಿ। ಪ್ರದ್ಯುಮ್ನನೆ ನಮ್ಮ ಮನದೈವ॥ ॥ ೧೫ ॥ ವನಜಲೋಚನ ಹರಿ ವನಿತೆಯೂದುವ ಶಂಖ। ಧ್ವನಿಕೇಳಿ ಬಂದಾ ನರಹರಿ॥ ಧ್ವನಿ ಕೇಳಿ ಬಂದಾ ನರಹರಿ ಶ್ರೀಕೃಷ್ಣ। ಅನಿರುದ್ಧ ನಮ್ಮ ಮನದೈವ ॥ ೧೬ ॥ ಪಾರಿಜಾತದ ಹೂವ ನಾರಿಗೆ ಇತ್ತಾನೆ। ವೀರ ದಾನವರಾ ಗೆಲಿದಾನೆ ॥ ವೀರ ದಾನವರಾ ಗೆಲಿದಾನೆ ನರಹರಿ। ಪುರುಷೋತ್ತಮ ನಮ್ಮ ಮನದೈವ ॥ ೧೭ ॥ ಅಕ್ಷಯಪದವೀವ ಪಕ್ಷಿವಾಹನ ದೇವ। ಕುಕ್ಷಿಯೊಳೀರೇಳು ಭುವನಾವ ॥ ಕುಕ್ಷಿಯೊಳೀರೇಳು ಭುವನಾವ ತಾಳ್ದಾ ಅ। ಧೋಕ್ಷಜ ನಮ್ಮ ಮನದೈವ ॥ ೧೮ ॥ ನರಕನಾ ಕೊಂದು ಹಿರಣ್ಯನ ಮರ್ದಿಸಿ। ಕರುಳ ಬಗೆದು ವನಮಾಲೆ ಹಾಕಿ॥ ಕರುಳಾ ಬಗೆದು ವನಮಾಲೆ ಹಾಕಿದ ನರಹರಿ। ನರಸಿಂಹನೆ ನಮ್ಮ ಮನದೈವ ॥ ೧೯ ॥ ಅಚ್ಯುತಾನಂತನೆ ಸಚ್ಚಿದಾನಂದನೆ। ಮಿತ್ರೆ ರುಕ್ಮಿಣಿಯ ಅರಸನೆ ॥ ಮಿತ್ರೆ ರುಕ್ಮಿಣಿಯ ಅರಸನೆ ನರಹರಿ। ಅಚ್ಯುತ ನಮ್ಮ ಮನದೈವ ॥ ೨೦ ॥ ಜಾನಕಿರಮಣನೆ ದಾನವಾಂತ

ಕನೆ । ದೀನ ರಕ್ಷಕನೆ ಸಲಹಯ್ಯ ॥ ದೀನ ರಕ್ಷಕನೆ ಸಲಹಯ್ಯ ನರಹರಿ । ಜನಾರ್ದನನೆ ನಮ್ಮ ಮನದೈವ ॥ ೨೧ ॥ ಅಪರಿಮಿತಮಹಿಮನೆ ಚಿತ್ರ ವಿಚಿತ್ರನೆ । ಗುಪ್ತವೇಷಗಳಾ ತಾಳಿದವನೆ ॥ ಗುಪ್ತವೇಷಗಳಾ ತಾಳಿದ ನರಹರಿ । ಉಪೇಂದ್ರನೆ ನಮ್ಮ ಮನದೈವ ॥ ೨೨ ॥ ಹರಗೆ ದೆಂಬಲನಾಗಿ ತರಿದೆ ಭಸ್ಮಾಸುರನ । ತರುಣಿ ರೂಪವ ತಾಳಿದೆ ॥ ತರುಣಿ ರೂಪವ ತಾಳಿದ ನರಹರಿ । ಶ್ರೀಹರಿಯೆ ನಮ್ಮ ಮನದೈವ ॥ ೨೩ ॥ ಕೃಷ್ಣಾವತಾರದಿ ಭಕ್ತರ ಸಲಹುತ । ವೈಷ್ಣವರ ಕುಲಕೆ ತಿಲಕನಾದಾನೆ ॥ ವೈಷ್ಣವರ ಕುಲಕೆ ತಿಲಕನಾದ ನರಹರಿ । ಕೃಷ್ಣನೇ ನಮ್ಮ ಮನದೈವ ॥ ॥ ೨೪ ॥ ಇಪ್ಪತ್ತನಾಲ್ಕು ನಾಮದ ಮಹಿಮೆಯ । ಅಶ್ವ ಹಯವದನನ ಕರುಣದಿ ॥ ಒಪ್ಪದಿಂದ ವೆರಸಿದ ನಮ್ಮ । ಅಪ್ರತಿಮ ಮುನಿ ವಾದಿರಾಜ ॥ ಜೋ ಜೋ ॥ ೨೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೭೬. ರಾಗ ಮೋಹನ, ಅಟತಾಳ.

ಕುದುರೆ ಬಂದಿದೆ । ಚೆಲುವ । ಕುದುರೆ ಬಂದಿದೆ ॥ ಪಲ್ಲ ॥ ಕುದುರೆ ಬಂದು ವಾದಿರಾಜಗೆ । ಮುದದಿ ಜ್ಞಾನ ಭಕುತಿ ಕೊಡುವ ॥ ॥ ಅನುಪಲ್ಲ ॥ ಹಿಂಗಾಲು ಕರ್ಕಶವಾದ ಕುದುರೆ । ಮುಂಗಾಲುಕೆವರಿ ಬಾಲವ ಬೀಸಿ ॥ ತಗ್ಗಿಸಿ ತಲೆಯ ಅಡಿಗಡಿಗೆ । ಚಿಗಿದು ಹಾರಿ ಹುಂಕರಿಸುವ ॥ ೧ ॥ ಗರುವೆ ಮಹಾಲಕುಮಿ ತನ್ನ ॥ ವರನೆಂದು ಭ್ರಮಿಸಿಕೊಂಡು ॥ ಉರದಲ್ಲಿ ಶ್ರೀವತ್ಸ ಕೌಸ್ತುಭ । ಹಾರ ಪದಕ ಧರಿಸಿ ಮೆರೆವ ॥ ॥ ೨ ॥ ಹಲ್ಲಣವಿಲ್ಲದೆ ನಿಲ್ಲದು ಕುದುರೆ । ವಲ್ಲದು ಕಡಿವಾಣ ಕುದುರೆ ಕಡಲೆ ॥ ಬೆಲ್ಲವ ಮೆಲುವ ಕುದುರೆ । ಚೆಲುವ ಹಯವದನನೆಂಬ ಕುದುರೆ ॥ ೩ ॥ ಶ್ರೀಃ ॥

೭೭. ರಾಗ ನಾದನಾಮಕ್ರಿಯೆ, ಏಕತಾಳ.

ನಾಗಶಯನನು ನಾ ನಿನಗಾಗಿ ಬಂದಿಹೆ । ಬಾಗಿಲ ತೆಗೆಯೇ ಭಾಮಾ । ನೀ । ಬಾಗಿಲ ತೆಗೆಯೇ ಭಾಮಾ ॥ ಪಲ್ಲ ॥ ಕೂಗುವ ನೀನ್ಯಾರೋ

ಈಗ ಹೊತ್ತಿಲ್ಲ । ಕೂಗಬೇಡ ಪೋಗೋ । ನೀ । ಕೂಗಬೇಡ ಪೋಗೋ ॥
॥ ಅನುಪಲ್ಲ ॥ ನೀರೊಳು ಮುಳುಗಿ ನಿಗಮ ಚೋರನ ಗೆದ್ದ । ನೀರಜಾ
ಕ್ಷನೆ ಭಾಮೆ । ನಾ । ನೀರಜಾಕ್ಷನೆ ಭಾಮೋ ॥ ನಾರುವ ಮೈಯ್ಯನು
ಎನ್ನಲ್ಲಿ ತೋರದೆ । ಸಾರೆಲೊ ದೂರಕೆ ರಂಗಾ । ನೀ । ಸಾರೆಲೊ ದೂರಕೆ
ರಂಗಾ ॥ ೧ ॥ ಮಂದರಗಿರಿಯನು ಬೆನ್ನಲಿ ಪೊತ್ತಂಥ । ಇಂದಿರೆಯರ
ಸನೆ ಭಾಮೋ । ನಾ । ಇಂದಿರೆಯರಸನೆ ಭಾಮೋ ॥ ಇಂದು ನಿನಗಂತಹ
ಭಾರಗಳಿಲ್ಲವು । ಸಿಂಧುವಿನೊಳು ನೀ ಪೋಗೈ । ಕೃಷ್ಣ । ಸಿಂಧುವಿನೊಳು
ನೀ ಪೋಗೈ ॥ ೨ ॥ ಧರಣಿಗೆ ಸುಖವನು ತೋರಿದ ಸೂಕರ । ಪರಮ
ಪುರುಷನೆ ಭಾಮೆ । ನಾ । ಪರಮ ಪುರುಷನೆ ಭಾಮೋ ॥ ವರಾಹರೂಪನೆ
ನಿನ್ನ ಘುರುಘುರು ಶಬ್ದವು । ಸರಿಬೀಳದೆನಗೆ ನೀ ಪೋಗೈ ಸರಿಬೀಳದೆ
ನಗೆ ನೀ ಪೋಗೈ ॥ ೩ ॥ ಬಾಲನ ತಾಪವ ಕೋಪದಿ ತರಿದಂಥ · ನಾರಸಿಂ
ಹನೆ ಭಾಮೆ । ನಾ । ನಾರಸಿಂಹನೆ ಭಾಮೋ ॥ ಜ್ವಾಲೆಯ ವದನಾ ಕ್ರೂರ
ಕಾರ್ಯಂಗಳಿ । ಗಂಜುವಳಲ್ಲ ಪೋಗೈ । ಕೃಷ್ಣ । ನಾನಂಜುವಳಲ್ಲ ಪೋಗೈ ॥
॥ ೪ ॥ ವಾಸವನನುಜನು ವಾಮನರೂಪನು । ನಾಶರಹಿತನೆ ಭಾಮೋ ।
ನಾ । ನಾಶರಹಿತನೆ ಭಾಮೋ ॥ ಕೂಸಿನ ರೂಪದಿ ಮೋಸವ ಮಾಡಿದಗೆ ।
ದಾಸಿಯಳೊಬ್ಬಳು ಬೇಕೇ । ರಂಗ । ದಾಸಿಯಳೊಬ್ಬಳು ಬೇಕೇ ॥ ೫ ॥
ತಾತನ ಮಾತಿಗೆ ತಾಯಿಯನಳಿದಂಥ । ಖ್ಯಾತ ಭಾರ್ಗವನೆ ಭಾಮೆ ।
ನಾ । ಖ್ಯಾತ ಭಾರ್ಗವನೆ ಭಾಮೋ ॥ ಮಾತೆಯನಳಿದಾ ಘಾತುಕ ನಿನಗೇ ।
ದೂತಿಯಳೊಬ್ಬಳು ಬೇಕೇ । ರಂಗ । ದೂತಿಯಳೊಬ್ಬಳು ಬೇಕೇ ॥ ೬ ॥
ದಶರಥನಂದನ ದಶಮುಖ ಭಂಜನ । ಪಶುಪತಿವಂದ್ಯನೆ ಭಾಮೋ । ನಾ ।
ಪಶುಪತಿವಂದ್ಯನೆ ಭಾಮೋ ॥ ಹಸನಾದ ಯೇಕಪತ್ನಿವ್ರತದವಗೆ ಪರ
ಸುದತಿಯೊಬ್ಬಳು ಬೇಕೇ । ರಂಗ । ಸುದತಿಯೊಬ್ಬಳು ಬೇಕೇ ॥ ೭ ॥ ಹದಿ
ನಾರುಸಾಸಿರ ನೂರೆಂಟು ಸುದತೇರ । ಬದಿಯಲಿಟ್ಟವನೇ ಭಾಮೆ । ನಾ ।
ಬದಿಯಲಿಟ್ಟವನೇ ಭಾಮೋ ॥ ಕದನಕ್ಕೆ ಬಾರದ ಮಾರ್ಗಂಗಳೇತಕೆ ।
ವದನ ಮುಚ್ಚಿಕೊಳ್ಳೊ । ಕೃಷ್ಣಾ । ನೀ ವದನ ಮುಚ್ಚಿಕೊಳ್ಳೊ ಕೃಷ್ಣ ॥
॥ ೮ ॥ ಬೌದ್ಧರ ಕುಲದಲ್ಲಿ ಪುಟ್ಟಿದವಾನಂತೆ । ಮುಗ್ಧರ ಮಾಡಿದೆ ಭಾಮೆ ।

ನಾ ಮುಗ್ಧರ ಮಾಡಿದೆ ಭಾವೇ॥ ಶುದ್ಧ ಗುಣಗಳಿಲ್ಲ ಯೆನ್ನಲ್ಲಿ ಪೇಳಲು। ಮುಗ್ಧನಾರಿಯು ನಾನಲ್ಲ। ಕೃಷ್ಣಾ। ಮುಗ್ಧನಾರಿಯು ನಾನಲ್ಲ॥೯॥ ವರ ತುರಗಾಕೃತಿ ಧರಿಸಿ ಧರೆಯೊಳು। ಚರಿಸಿದ ಧೊರೆವರ ಭಾಮೆ। ನಾ। ಚರಿಸಿದ ಧೊರೆವರ ಭಾಮೇ॥ ತುರಗದ ಚಾಕರಿಯೊಳಿರುವವನಿಗೆ। ತರುಣಿಯು ಭೋಗವು ಬೇಕೆ। ರಂಗಾ। ತರುಣಿಯು ಭೋಗವು ಬೇಕೇ॥೧೦॥ ಸರುವ ಪ್ರಾಣಿಗಳ ಉದರದಲಿಟ್ಟು। ಶರಧಿಯೊಳು ಮಲಗಿದವ ಭಾವೇ। ನಾ। ಶರಧಿಯೊಳು ಮಲಗಿದವ ಭಾವೇ॥ ಧೊರೆ ಹಯವದನನ ಚರಣಕ್ಕೆರಗುತ। ತೆರೆದಳು ಬಾಗಿಲ ಭಾವೇ। ಆಗ। ತೆರೆದಳು ಬಾಗಿಲ ಭಾವೇ॥ ೧೧॥ ಶ್ರೀಃ॥

## ೭೮. ರಾಗ ಸೌರಾಷ್ಟ್ರ ಏಕತಾಳ.

ಸಾಕು ಷಡಗರವ ಬಿಟ್ಟು ಹರಿಯ ನೆನೆ ಬೇಗಾ। ನೂಕು ಭವದ ಬೇಸರ ದುಷ್ಕರ್ಮವನೀಗಾ॥ ಪಲ್ಲ॥ ವೇದವ ಗರಿಯಾ ಧರೆಯನುದ್ಧರಿಸಿ ದನ್ಯಾರೂ। ಬಾಧಿಪ ಖಳನುದರ ಸೀಳ್ದಗೆ ಸರಿದೋರೂ॥ ಪಾದನಖದಿ ಬೊಮ್ಮಾಂಡವನೊಡೆದನ ಸಾರೂ। ಕ್ರೋಧದಿ ನೃಪರನು ಕೊಂದವನ ಮಹಿಮೆಯ ಬೀರೂ॥ ೧॥ ಸೇತುವೆಗಟ್ಟಿದ ರಾಮನಿಂದಿಪ್ಪುವ ಬೇಡೂ। ಭೂತರುಣಿಗೆ ಸುಖವಿತ್ತನ ಪೂಜೆಯ ಮಾಡೂ॥ ಖ್ಯಾತ ದಿಗಂಬರ ದೇವನ ಕುಶಲವ ನೋಡೂ। ಭೀತಿಯ ಬಿಡುತಲಿ ಭಜನದಿ ಲೋಲಾಡೂ॥ ೨॥ ಅನುದಿನ ಪೊಕ್ಕು ನೀ ಸಾರಿಸು ಸಜ್ಜನರೆಡೆಗೆ। ಮನೆಮನೆ ವಾರ್ತೆಯ ಬಿಟ್ಟು ಧ್ಯಾನಿಸಿರಡಿಗಡಿಗೆ॥ ಕನಸಿನೊಳಾದರು ಪೋಗದಿರಧಮರ ಬಳಿಗೇ। ಗುಣನಿಧಿ ಹಯವದನನ ಭಜಿಸಿರೋ ಒಂದು ಘಳಿಗೆ॥ ೩॥ ಶ್ರೀಃ॥

## ೭೯. ರಾಗ ಮುಖಾರಿ, ಝಂಪೆತಾಳ.

ಎಂಜಲೆನ್ನಲು ಬಹುದೆ ಮನುಜರಿವನಾ॥ ಪಲ್ಲ॥ ಅಘವನಧನಂಜಯ ವೈಕುಂಠದಾಸರ ವದನದ ಕಣಾ॥ ಅನುಪಲ್ಲ॥ ವದನವೆಂಬಾಕಾಶದಲಿ ಭಕುತಿಜೀಮೂತ। ಪದುಮನಾಭನ ನಾಮಾಮೃತದ ಕಡಲಾ॥ ಮುದದಿಂದ ತಕ್ಕೊಂಡು ಯೆನ್ನಂಗದೇಶದಲಿ। ಹದನರಿತು ಸುರಿದು

ಮುಕುತಿಫಲಬೆಳಸಿದದನಾ ॥ ೧ ॥ ಹೃದಯ ಕಾರಾಗೃಹದಿ ಶ್ರೀಹರಿಯು ನಾವಾಗ । ಹುದಗಿ ಅಗಲಿಸಿದ ಕಾರಣದಂಗ.ಟದಿ ॥ ಉದಿಸಿ ಗಂಗೆಯು ಪ್ರೋಕ್ಷ ಕೆಡಯಿಲ್ಲದಲೆ ಇವರ । ವದನದೊಳ್ ಪೊರಟೆನ್ನ ಮೇಲೆ ಪರಿದ ದನಾ ॥ ೨ ॥ ಪರಸನ್ನ ಹಯವದನ ಚರಣಸರಸಿಜ ಮಧು । ಕರನು ವೈಕುಂಠದಾಸೋತ್ತಮನ್ನ ॥ ವರವದನದಲ್ಲಿ ವೇದಶಾಸ್ತ್ರಾಗಮದ ತಾತ್ಪ ರ್ಯ । ಬಿಂದುಗಳೆನ್ನ ಮೇಲೆ ಪರಿದದನಾ ॥ ೩ ॥ ಶ್ರೀ ॥

## ೮೦. ರಾಗ ಭೈರವಿ, ಛಾಪುತಾಳ.

ನೀಲವರ್ಣ ವಿಠಲ ನಿನ್ನ ನಾನೆ ಮೆಚ್ಚಿದೆ ॥ ಪಲ್ಲ ॥ ಎನ್ನ ಪಾಲಿ ಪಯ್ಯ ಪರಮ ಪಾವನ್ನ ಮೆಚ್ಚಿದೆ ॥ ಅನುಪಲ್ಲ ॥ ಅರವಿಂದಶರಧಿಲೋಚ ನಕೆ ಭಯಾ । ವರನೀಲೋತ್ಪಲದೀ ವಕ್ಷದೊಳು ಛಾಯಾ ॥ ಸ್ಫುರನ ಛಾಳಿಗೆ ಕಂಡು ನೊಂದೆನೊ ಪ್ರಿಯಾ । ನಿನ್ನ ಕರುಣಕವಚವನ್ನು ತೊಡಿಸೋ ಜೀಯಾ ॥ ೧ ॥ ಉರದ ಮೇಲಿಡು ಪಾದಬಾಲರವಿಯಾ । ತರಳಲೋಚನಕೆ ಮುಖೇಂದುಛವಿಯಾ ॥ ಗುರಿಮಾಡಿ ರಕ್ಷಿಸೆನ್ನ ಸಿರಿ ದೇವಿಯಾ । ವರವ ಪಡುವೇನೆ ನಿನ್ನಂಘ್ರಿಸೇವೆಯಾ ॥ ೨ ॥ ಸುರಮುನಿ ಗಳ ಮನಕೆ ನಿಲುಕದಿಪ್ಪನಾ । ಎನ್ನ ಮನೆಗೆ ಬಾರೆಂಬೊದುಚಿತವಲ್ಲ ನಿನ್ನ ॥ ಅನಿಮಿತ್ತಬಂಧುಯೆಂಬ ಗುಣಸಂಪನ್ನ । ಎನ್ನಯ್ಯ ನೀನೆ ಬಾರಯ್ಯ ಹಯವದನಾ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೮೧. ರಾಗ ಮುಖಾರಿ, ಆದಿತಾಳ.

ಏನು ಹೇಳಲಿ ನರಹರಿ ನಿನ್ನ ಮಹಿಮೆಯ ॥ ಪಲ್ಲ ॥ ನಿನ್ನ ಧ್ಯಾನ ಮಾಡೆನೆಂದರೆ ನಿಲ್ಲಗೊಡದು ಮನಾ ॥ ಅನುಪಲ್ಲ ॥ ಸಚ್ಚಿದಾನಂದಸ ಪಾದಾರವಿಂದವ । ಮೆಚ್ಚಿ ಹಸನಾಗಿ ಇರುವೆಂದಡೆ ॥ ಹುಚ್ಚಿಟ್ಟ ಕಪಿಯಂತೆ ವಿಷಯವೆಂಬ ಅಡವಿಯಲಿ । ಕಿಚ್ಚುಕೊಂಗೊಂಡು ಯೆನ್ನ ಕಾಡುತಿದೆ ರಂಗಾ ॥ ೧ ॥ ವಾಸುದೇವನ ಗುಣಂಗಳ ಸ್ತು ।ತಿ ಸದೆ ದುರಾಸೆಯೊಳು

ಬಿದ್ದು ಕಾಡಿಸುವದೆ ॥ ಲೇಸಾಗಿ ನಾಯಿಬಾಲಕೆ ನಾರಾಯಣ ತೈಲಾ । ಏಸುಭಾರಿ ತೀಡಿದರೆ ನೀಟಾಗುವದೆ ॥ ೨ ॥ ಸಾಧುಸಜ್ಜನರ ಸಂಗವ ಮಾಡಲೊಲ್ಲದೆ । ಬಾಧಿಸುತಿದೆ ದುಷ್ಟಸಂಗದಿಂದಾ । ಮಾಧವ ಭಕ್ತವತ್ಸಲ ಹಯವದನನೆ । ನೀ ದಯಮಾಡಿ ನಿನ್ನಂತೆ ಮಾಡು ಯೆನ್ನ ಮನಾ ॥ ೩ । ಶ್ರೀಃ ॥

## ೮೨. ರಾಗ ಪೂರ್ವಿ, ಛಾಪ್ರುತಾಳ.

ನಲಿವಾ ಬೆಣ್ಣೆಯನು ಮೆಲುವ ಕೃಷ್ಣ ನಮಗೆ । ವಲಿವಾ ಕಳ್ಳರನು ಕೊಲುವಾ ॥ ಪಲ್ಲ ॥ ಜಗವಾತನ ಕೆಳಗೆ ಬಗೆವಾ । ತನಗೆ ಕೈಮುಗಿವ ಜನರ । ಅಘವ ತೆಗೆವಾ ॥ ೧ ॥ ಬಡವರಭೀಷ್ಟವ ಕೊಡುವಾ । ದುರಿತಗಳ ಕಳೆವಾ । ದೈತ್ಯರನ ಬಡಿವಾ ॥ ೨ ॥ ಕಡವಗೋಲನ ಬಿಟ್ಟಿಡುವಾ । ಪಟ್ಟೆಗಳನುಡುವಾ । ಭೂಷಣವನಿಡುವಾ ॥ ೩ ॥ ಪರಿಣಾವಾಗರ್ಚಕನ । ಚರಣಾದುದಕೆ ಪುರ । ಹರಣಾ ಮಸ್ತಕಭರಣಾ ॥ ೪ ॥ ಶರಣಜನರ ಹಿತಕರಣಾ । ಹಯವದನ ಸ್ಮರಣಾ । ಭವಕೆ ಸಂದಡರಣಾ ॥ ೫ ॥ ಶ್ರೀಃ ॥

## ೮೩. ರಾಗ ಕಾಂಬೋಧಿ, ಛಾಪ್ರುತಾಳ.

ನೂರೆಂಟು ನೆನೆದು ಫಲವೇನು ॥ ಪಲ್ಲ ॥ ಈರೇಳುಜಗದೊಡೆಯ ಹರಿಯನೊಮ್ಮೆ ನೆನೆ ಮನವೆ ॥ ಅನುಪಲ್ಲ ॥ ಸಾಕು ದುರ್ಜನಬಾಟ । ಸಾಕು ಸತಿಯರಾಕೂಟ । ಸಾಕು ಸವಿಯನ್ನದೂಟ । ಸಾಕು ಘನಕೂಟಾ ॥ ಸಾಕು ದೇಶಕೆ ವೋಟ । ಸಾಕು ಪಲೆಭವನೋಟ । ಸಾಕದೆಲ್ಲ ಖಳಕೋಟ । ಸಾಕು ಮನೆಮಾಟಾ ॥ ೧ ॥ ಧನದಾಶೆಗಳಲದಿರು । ಭವದುಃಖಬಳಲದಿರು । ಜನಾರ್ದನನ ಮರಯದಿರು । ಈತನುವ ಪೊರಯದಿರು ॥ ಅನಘಜನರೊಡನಾಡು । ದಿನದಿನದಿ ಶುಭ ಕೂಡು । ಇನಿತು ಜನ್ಮವ ಬಿಡೊ । ಇನ್ನು ಮುಕುತಿ ಬೇಡೋ ॥ ೨ ॥ ಕೇಳು ಹರಿನಾಮವನು । ಕೇಳು ಹರಿಮಹಿಮೆಯನು । ಬಾಳು ಬಂದಷ್ಟರಿಂದ । ತಾಳು ಹಸಿತೃಷೆಗಳ ॥ ಶ್ರೀಲಲನೆಯೊಳಿದ್ದ ಹಯವದನನೆ ಕರು । ಣಾಳುವಿನ ಆಳುತನ ಬೇಡು । ಬಿಡು ದುರಾಸೆಗಳಾ ॥ ೩ ॥ ಶ್ರೀಃ ॥

### ೮೪. ರಾಗ ಭೈರವಿ, ಅಟತಾಳ.

ಮನ್ನಿಸೆನ್ನ ಮಧುಸೂದನ ॥ ಪಲ್ಲ ॥ ಮದನನಯ್ಯ । ಮೋಹನರಾಯ । ಉನ್ನತಗುಣನಿಲಯ । ಉಡುಪಿನ ಕೃಷ್ಣರಾಯ ॥ ಅನುಪಲ್ಲ ॥ ಶ್ರುತಿಗಳ ತಂದು ಮುನ್ನ । ಸುರಮುನಿಗಳ ಮನ । ಕೃತಿಹರುಷವ ಕೊಟ್ಟ ಅಗಣಿತಗುಣರನ್ನ । ಯತಿಗಳ ಪಾಲಿಸಿದೆ । ಮುಂದುವರಿದ ದಿತಿಜರ ಸೋಲಿಸಿದೆ । ಈ ಮಹಿಯೊಳು । ಮತಿವಂತರ ಪೊರೆದೆ ಮಹಿಮೆಯಿಂದ ಮೆರೆದೆ ॥ ೧ ॥ ಅಚ್ಚ ಹಾರಶೋಭಿಕಂಠ । ಆಶ್ರಿತರಿಗೆ ನೀ ನಂಟ । ಮೆಚ್ಚಿದ ಪಾರ್ಥನ ಮಿತ್ರನೆನಿಸುವ ಸುಚರಿತ್ರ । ಮೆಚ್ಚಿದ ನಿನ್ನಯ ಭಗತ । ವೈಕುಂಠದ ಮುಚ್ಚುಲತೆಗಿಸಲು ಶಕ್ತ । ಅಚ್ಯುತ ನಿನ್ನ । ಅರ್ಚಿಸಿದವನೆ ಕೃತಾರ್ಥ । ಅವನೆ ಸರ್ವಸಮರ್ಥ ॥ ೨ ॥ ಎಂದೆಂದು ನಿನ್ನವರೊಳು । ಯೆನ್ನ ಕೂಡಿಸೊ ಕೃಪಾಳು । ವಂದ್ಯ ಗರುಡನ ಸ್ಕಂಧವೇರಿ ಬಾರೊ ಗೋವಿಂದ । ತಂದೆ ನೀನೆ ತಾಯಿ ನೀನೆ । ಹಯವದನ ಬಂಧು ನೀನೆ ಬಳಗ ನೀನೆ । ಮತ್ತದರಿಂದ । ಕುಂದ ನೋಡು ಅಘ ಬಿಡು ಕಂಡು ಕರುಣವ ಮಾಡೂ ॥ ೩ ॥ ತ್ರಿ ॥

### ೮೫. ರಾಗ ಧನ್ಯಾಸಿ, ಏಕತಾಳ.

ಮಂಡೆ ಬೋಳಾದರೇನು ಮನಶುದ್ಧಿ ಇಲ್ಲವು ॥ ಪಲ್ಲ ॥ ಕಂಡು ಹಯವದನನ್ನ ವಲಿಸಿಕೊಂಡವನು ಧನ್ಯಾ ॥ ಅನುಪಲ್ಲ ॥ ನಾರದರವತಾರರೆಂದು ಜಗಕೆ ತೋರಿ । ಸಿರಿಪುರಂದರದಾಸರ ಮನೆಯಲ್ಲಿ । ಪರಿಪರಿ ಲೀಲೆಯ ಮಾಡಿ ಬಿಡದೆ ನಿತ್ಯ । ಅರಿತು ಅವರ ಸಾಧನಕೆ ಸಾರಥಿಯಾದೀ ॥ ೧ ॥ ಗುರು ವ್ಯಾಸಮುನಿ ನಿಮ್ಮನೋಡುವೆನೆಂತೆಂದೊಡೆ । ಮರೆಮಾಡಿ ಮಾರುರೂಪಜನುಮಾವೆಂದೀ ॥ ಹರುಷದಿ ಕನಸಿನೊಳಗೆ ಬಂದುಭಯರಿಗೆ । ಅರುಪಿಸಿ ಸ್ವರೂಪ ಅರಿಯದಂತಿದ್ಯೊ ದೇವಾ ॥ ೨ ॥ ಅವರ ಮೇಲಿದ್ದ ದಯೆ ಯೆನಗೆ ಯೆಂದಿಗೋ ದೇವಾ । ಯಾವದು ಭರವಸದೋರದಯ್ಯಾ ॥ ಕವಿದೆಮ್ಮಭಿಮಾನ ಬಿಟ್ಟರೆ ಬಿಡದಯ್ಯಾ । ಅವಕಾಲಕೆ ನಿನ್ನ ದಾಸನೆಂಬಂತೆ ಮಾಡೋ ॥ ೩ ॥ ನಮ್ಮ ಗುರುಗಳ ಸಮ್ಮ

ತದಿಂದುಡುಪಿಯಲ್ಲಿ । ಘವ್ಯ್ವನೆ ಪೇಳಿದೆನೊ ಸಟೆಯಲ್ಲವೊ ॥ ಸುವ್ಯ್ವನೆ ತಿಳಿಯುಂದೆ ಅಲ್ಲವೆಂದವಗಿನ್ನು । ಘವ್ಯ್ವನೆ ತವುಸಿನೊಳಿಹುದು ಸತ್ಯವೂ॥ ॥ ೪ ॥ ಓದಿದಾಕ್ಷಣದಿಂದ ಧನ್ಯನೆಂದೆನು ನಾನು । ಸಾಧಿಸಲಾಪೆನೆ ನಿನ್ನ ಸೇವೆಯನೂ ॥ ಆದಿವುೂರುತಿ ಸಿರಿಹಯವದನರೇಯಾ । ವೋದದಿಂದ ನಿನ್ನ ದಾಸರ ಸಂಗದಲ್ಲಿಡು ಕಂಡ್ಯಾ ॥ ೫ ॥ ಶ್ರೀಃ ॥

॥ ಶ್ರೀಪುಷ್ಪೋಶಾರ್ಪಣಮಸ್ತು ॥

೮೬. ರಾಗ ಭೂಪಾಳಿ, ಆದಿತಾಳ,

ನಾರಾಯಣನ ವರ್ಣಿಸು ವುನ್ನಿಸು ಆರಾಧನೆಗಳ ವೂಡುತ ಪಾಡುತ । ನೀರಾಜನದಿ ಅವನರ್ಚಿಸು ಮೆಚ್ಚಿಸು ವೇದಪಾರಾಯಣ ಪ್ರಿಯನಾ ॥ ಪಲ್ಲ ॥ ಅವನ ಶ್ರವಣ ಮನನ ನಿದಿಧ್ಯಾಸನ ಶ್ರೀವಿಷ್ಣುಭಕ್ತಿ ಮಹಪ್ರಸಾದಂಗಳೂ । ಕೈವಲ್ಯಪದಕಿಕ್ಕಿದ ನಿಚ್ಚಣಿಕೆಂತ ಭಾವಜ್ಞರು ಪೇಳ್ವರೂ ॥ ಜೀವನ ಜವನ ಬಾಧೆಗಳ ತಪ್ಪಿಸಿ ಪಾವನ ವೈಕುಂಠಪುರದೊಳಗೆಂದೆಂದು । ಆವಾಸವೂಡಿ ಸುಖಿಸಬೇಕಾದರ ಸೇವಿಸು ವೈಷ್ಣವರಾ ॥ ೧ ॥ ಲೋಕದೀ ವರಂ ವರಯ ಭದ್ರಂ ತೇ ಯುತೇ ಕೈವಲ್ಯವೂತ್ಮನಃ । ಏಕ ಏವೇಶ್ವರಸ್ತಸ್ಯ ಭಗವಾನ್ವಿಷ್ಣುರವ್ಯಯ ಎಂಬಾ ॥ ಈ ಕಲಿಯುಗದಿ ಬೇಕಾದ ಪುರಾಣದ ವಾಕ್ಯ ವಿವೇಕವ ಮನದೊಳ್ವಿಚಾರಿಸು । ಸ್ವೀಕರಿಸು ವೈಷ್ಣವಮತವ ಜೀವ ನಿರಾಕರಿಸನ್ಯಮತವಾ ॥ ೨ ॥ ದ್ವಾರಾವತಿಯ ಗೋಪೀಚಂದನದಿಂದ ಶ್ರೀರಮಣನ ವರನಾಮವ ನೆನದೆರ । ಡಾರೂರ್ಧ್ವಪುಂಡ್ರಗಳನೆ ಧರಿಸೆಂದೆಂದು ವೀರವೈಷ್ಣವಗುರುವಾ ॥ ಸೇರಿ ಸಂತಪ್ತ ಸುದರುಶನ ಶಂಖವ ಧಾರಣವನು ಭುಜಯುಗದೊಳು ವೂಡಿ । ವುುರಾರಿಯ ಮಂತ್ರಗಳವರಿಂದಲಿ ಕೇಳಿ ಓರಂತೆ ಜಪಿಸುತಿರೂ ॥ ೩ ॥ ಹರಿನಿರ್ಮಾಲ್ಯವ ಶಿರದಲ್ಲಿ ಧರಿಸು ಶ್ರೀಹರಿ ನೈವೇದ್ಯವನೆ ಭುಂಜಿಸುತ್ತಿರು । ಇರುಳು ಹಗಲು ಹರಿಸ್ಮರಣೆಯ ಬಿಡದಿರು ದುರುಳರ ಕೂಡದಿರು ॥ ಹರಿತೀರ್ಥದ ನಿಯಮವನೆ ಮರೆಯದಿರು ಹರಿ ಪರದೈವತೆಯೆಂಬುದರುಪುತಿರು । ಗುರುಮುಖದಿಂದ ಸಚ್ಛಾಸ್ತ್ರವಿಚಾರವ ನಿರುತ

ಸೀ ಮಾಡುತಿರು ॥ ೪ ॥ ತುಷ್ಟನಹನು ಎಳ್ಳಷ್ಟು ಮುಂಪಟ್ಟರೆ ಅಷ್ಟಿಷ್ಟೆನ್ನದೆ ಸಕ । ಲೋಕಂಗಳ ಕೊಟ್ಟು ಕಾವ ಶಕ್ರನಿಗೆ ತ್ರಿವಿಷ್ಟಪ ಪಟ್ಟಗಟ್ಟಿದವಾ ॥ ನಿಷ್ಠುರನೊಲ್ಲ ವಿಶಿಷ್ಟರಿಗೊಲಿದ ದುಷ್ಟರ ತಂದಟ್ಟಿದ ಜಗಜಟ್ಟಿ ಅ । ರಿಷ್ಟಮುಷ್ಟಿಕಾದ್ಯರ ಹುಡಿಗುಟ್ಟಿದ ವಿಠಲ ಬಲು ದಿಟ್ಟಾ ॥ ೫ ॥ ಆವನ ಪಕ್ಷಬಲಕಿದಿರಿಲ್ಲ ಕೇಳಾವನ ಕುಕ್ಷಿಯೊಳಕ್ಕು ಜಗತ್ರಯ । ಆವನು ಶಿಕ್ಷಿಪ ರಕ್ಷಿಪ ಮತ್ತಾವನೆ ಪಾವನನೂ ॥ ಆವನ ಶಿಕ್ಷೆಯು ವಿಕ್ಕವರಿಲ್ಲ ಕೇಳಾವನುಪೇಕ್ಷೆಯು ಕುಲಕ್ಷಯವೀವುದು । ಆವನರುಕ್ರಮ ವಿಕ್ರಮನೆನಿಸಿದ ದೇವನಿಗಾವನೆಣೆ ॥ ೬ ॥ ಕಂದ ಬಾ ಎಂದರೆ ನಂದನಿಗೊಲಿದ ಕುಂದು ಕೊರತೆಬಂದರೆ ನೊಂದುಕೊಳ್ಳನು । ಇಂದಿರೆಯುರಪ ಮುಕುಂದನೆ ಮುಕುತಿಯಾನಂದವನೀವ ದೇವಾ ॥ ಸಂದೇಹವಿಲ್ಲದೆ ಒಂದೆ ಮನದಿ ಗೋವಿಂದನ ನೆನೆದ ಗಜೇಂದ್ರನಿಗೊಲಿದಾ । ಇಂದ್ರನ ಸಲಹಿದುಪೇಂದ್ರನ ರಘುಕುಲಚಂದ್ರನ ವಂದಿಸಿರೋ ॥ ೭ ॥ ಓಡುವ ನಡುಗುವ ದೇವನೆ ಬಲ್ಲನು ಬಾಡುವ ಬೇಡುವ ಮುನಿಗಳೆ ಬಲ್ಲರು । ನೋಡುವ ನುಡಿವ ಮುಕುಂತರೆ ಬಲ್ಲರೊಡನಾಡುವ ರಮೆ ಬಲ್ಲಳೂ ॥ ಊಡುವ ಪಾಡುವ ಯಶೋದೆ ತಾ ಬಲ್ಲಳು ಕಾಡುವ ಮಡಿವ ಖಳರ ಹುಡಿಗುಟ್ಟಿದ । ನಾಡೊಳು ಕೇಡ ಕಳೆವ ಕೃಷ್ಣಗನ್ಯರು ಈಡೆಂದಾಡಬೇಡ ಮೂಢಾ ॥ ೮ ॥ ಸಿರಿದೇವಿಯಾವನಿಗರಸಿ ಸುರರ ಗುರು ವಿರಿಂಚನಾವನ ವರಕುವರನೆಂತೆಂಬರು । ಉರಗಾಧಿಪನಾವನ ಮಂಚ ವಿಹಗೇಶ್ವರನಾವನ ವಾಹನಾ ॥ ಪುರಹರನಾವನುಂಗುಟ ನೀರುಪೊರುವ ನಿರ್ಜರಪತಿಯಾವನ । ಚರಣಸೇವಕನಾದ ನರರೊಳಗಾ ಹಯವದನಗಿನ್ನಾರನು ಸರಿಯೆಂದು ಪೇಳುವೆನೈ ॥ ೯ ॥

## ೮೭. ರಾಗ ಮಲಹರಿ, ಆಟತಾಳ.

ಆಹರಿ ನಾನೆಂಬ ಕುಮತವ ಸುಡು ಸುಡು । ದೇಹಿಯುಣಾವುಣಾದವನ ನೋಡುತಲಿಹಾ ॥ ಪಲ್ಲ ॥ ನೀರೊಳು ಬಹುಕಾಲ ಪೊಕ್ಕು ಮುಳುಗಿದವ । ಭಾರದ ಗಿರಿಯನುದ್ಧರಿಸಿದವ ॥ ಈರೇಳುಲೋಕದ ಹೊರೆಯನೆಲ್ಲವ ಹೊತ್ತು । ಹಾರುವ ಹಕ್ಕಿಯ ಹೆಗಲನೇರಿ ಬಹಾ ॥ ೧ ॥ ಜಲಚರ

ಸ್ಥಲಚರ ಯಾಚಕನೆನಿಸಿ ಮ । ತ್ತಲಸದೆ ಮಾತೃವಧೆಯ ಮಾಡಿದಾ ॥ ಛಲದಿಂದಸುರರ ಕೊಂದು ಸಿಂಧುವ ದಾಟಿ । ಬಲುಗಳ್ಳನೆನಿಸಿ ಮಾವನ ಸೀಳ್ದವಾ ॥ ೨ ॥ ಸತಿಯರ ವ್ರತವ ಗೆಡಿಸಿ ಕುಮಾರ್ಗವ ತೋರಿ । ಕ್ಷಿತಿಯೊಳು ಯುಗದ ರಾಯರ ಕೊಲ್ಲುವ ॥ ಶ್ರುತಿಸಿದ್ಧ ಪಥದಿ ನಡೆದು ಪಾಪಕಂಜದೆ । ಯತಿಶ್ರುತಿತತಿಗಳೆಲ್ಲರ ಹೊಂದಿಹಾ ॥ ೩ ॥ ಸಾವಿರ ಫಣದ ಫಣಿಯೊಳ್ಪಟ್ಟುವಡೆದಾಗ । ಹಾವಿನ ಮೈಮೇಲೊರಗಿದವ ॥ ಜೀವರೆಲ್ಲರ ಕೊಂದು ಧರೆಯನೆಲ್ಲವ ನುಂಗಿ । ಸ್ಥಾವರದೊಂದೆಲೆಯನೆ ಪೊಂದಿಹಾ ॥ ೪ ॥ ಉರಿವ ಕಿಚ್ಚನುಂಗಿ ಜ್ವಲಿಸುವಗ್ನಿಯೊಳು । ಸ್ಥಿರವಾದ ಪ್ರಬಲದೈತ್ಯರ ವೈರವಾ ॥ ಸಿರಿಹಯವದನನ್ನ ದಾಸರ ದಾಸನು । ಚರಣಸೇವಕನೆಂಬ ಮತವೆ ಲೇಸೂ ॥ ೫ ॥ ಶ್ರೀಃ ॥

### ೮೮, ರಾಗ ಪೂರ್ವಿ, ರೂಪಕತಾಳ.

ನಾನು ಸಜ್ಜನನಾದೊಡೆ ಹೀನವಿಷಯಂಗಳಿಗೆ ಯೆರಗುವೆನೇನಯ್ಯ ॥ ಪಲ್ಲ ॥ ಚಿತ್ತವು ಪುರುಷೋತ್ತಮನಲ್ಲಿದ್ದಡೆ । ಉತ್ತಮರಾದವರೊಡನಾಡದೆ ॥ ತತ್ತ್ವವಿಚಾರವೆಂದರಿಯದೆ ನಾನು । ಮತ್ತರ ಸಂಗವ ಮಾಡುವೆನೇನಯ್ಯ ॥ ೧ ॥ ನಿರುತವು ಪರನಿಂದೆಗಳ ಮಾಡುತಲಿ । ಗುರುಹಿರಿಯರನು ವಿಚಾರಿಸದೆ ॥ ಗುರುವೆ ದೈವವೆಂದರಿಯದೆ ನಾನು । ಪರರ ಒಡವೆಯನು ಬಯಸುವೆನೇನಯ್ಯ ॥ ೨ ॥ ಹೇಯಶರೀರವ ಪೋಷಿಸುವೆನೆಂದು । ಮಾಯವ ಮಾಡಿ ನಾ ಬಳಲುತಿಹೆ ॥ ರಾಯರು ಮಾಡಿದ ಶರಣರ ಹೊರೆವ । ಹಯವದನ ನಿನ್ನ ನಾ ಮರೆತಿಹೆನೇನಯ್ಯ ॥ ೩ ॥

### ೮೯. ರಾಗ ಸೌರಾಷ್ಟ್ರ, ಏಕತಾಳ.

ಎಚ್ಚರಿಕೆಚ್ಚರಿಕೆ ॥ ಪಲ್ಲ ॥ ನಿಶ್ಚಿಂತೆಯಲಿ ಹರಿಯ ಧ್ಯಾನವ ಮಾಡುವದಕ್ಕೆ ॥ ಅನುಪಲ್ಲ ॥ ಅಜನು ತೊಳೆದು ಅರ್ಚಿಸುವ ಶ್ರೀಪಾದಕ್ಕೆ ಯೆಚ್ಚರಿಕೆ । ಧ್ವಜವಜ್ರರೇಖೆಯಿಂದೊಪ್ಪುವ ಪಾದಕ್ಕೆ ಯೆಚ್ಚರಿಕೆ ॥ ವ್ರಜದ ಗೋಪಿಯರು ಭಜಿಸುವ ಪಾದಕ್ಕೆ ಯೆಚ್ಚರಿಕೆ । ಸುಜನರೆಲ್ಲರು ಬಂದು ಯೆರಗುವ ಪಾದಕ್ಕೆ ಯೆಚ್ಚರಿಕೆ ॥ ೧ ॥ ಸುರರೆಲ್ಲರು ಬಂದು ಯೆರಗುವ

ಪಾದಕ್ಕೆ ಯೆಚ್ಚರಿಕೆ । ಸರಸಿಜಾಕ್ಷಿ ಸವಿದೊತ್ತುವ ಪಾದಕ್ಕೆ ಯೆಚ್ಚರಿಕೆ ॥ ಗರುಡನೇರಿ ಮೆರೆವ ಗಾಂಭೀರ್ಯಪಾದಕ್ಕೆ ಯೆಚ್ಚರಿಕೆ । ಉರಗನ ಮೇಲೆ ಓಡ್ಯಾಡಿದ ಪಾದಕ್ಕೆ ಯೆಚ್ಚರಿಕೆ ॥ ೨ ॥ ಲಲನೆರ ಸ್ತನದಲ್ಲಿ ಕುಣಿದಂಥಾ ಪಾದಕ್ಕೆ ಯೆಚ್ಚರಿಕೆ । ಜಲಜಾಸನ ಬಂದು ವಂದಿಸ ಪಾದಕ್ಕೆ ಯೆಚ್ಚರಿಕೆ ॥ ಶಿಲೆಯು ಸ್ತ್ರೀಯುಳ ಮಾಡಿದ ಶೃಂಗಾರಪಾದಕ್ಕೆ ಯೆಚ್ಚರಿಕೆ । ಚೆಲುವ ಹಯವದನನ ಚರಣಾರವಿಂದಕ್ಕೆ ಯೆಚ್ಚರಿಕೆ ॥ ೩ ॥ ಶ್ರೀ ॥

## ೯೦. ರಾಗ ಕೇದಾರಗೌಳ, ತ್ರಿಪುಟತಾಳ.

ಈಗಲೋ ಇನ್ಯಾವಾಗಲೋ ಈ ತನು ಹೋಗದಿರದು ॥ ಪಲ್ಲ ॥ ಭೋಗದಾಸೆ ಬಿಡಿಸಯ್ಯ ನಾಗಶಯನ ನಳಿನನಯನ ॥ ಅನುಪಲ್ಲ ॥ ಎಂಭತ್ತುನಾಲ್ಕುಲಕ್ಷ ಯೋನಿಗಳಲಿ ಬಂದು । ಅಂಬುಜಾಕ್ಷನೊಂದೆನಯ್ಯ ಹಿಂದೆ ಮಾಡಿದ ಅಘದಿಂದಾ ॥ ಕುಂಭಿಪಾಕ ಮೊದಲಾದ ಕುತ್ಸಿತ ನರಕದೊಳ್ಬಿದ್ದು । ಉಂಬೊ ದುಃಖ ಬಿಡಿಸಯ್ಯ ಉದಧಿಶಯನ ಪುಣ್ಯಕಥನ ॥ ೧ ॥ ಹೆಣ್ಣುಮಣ್ಣೊನ್ನಾಶೆ ಬಿಡದು ಪುಣ್ಯಾಕೆ ಮನ ಒಡಂಬಡದು । ಎನ್ನದೆಂಬೊ ಮಮತೆ ತಗ್ಗದು ಧನ್ಯಜನರಿಗೆ ತಲೆಯು ಬಾಗದೊ ॥ ನಿನ್ನ ಕಥೆಯು ಕರ್ಣ ಕೇಳದು ಅನ್ಯ ವಾರ್ತೆಗೆ ಹೊತ್ತು ಸಾಲದು । ಇನ್ನು ಕೇಳಿಗೆ ಬಾರದಲ್ಲೋ ಮುಂದಿನ ಗತಿಗೆ ದಾರಿ ತೋರದು ॥ ೨ ॥ ಸ್ನಾನ ಜಪಂಗಳನು ಮಾಳ್ಪೆ ಸಕಲ ಜನರ ಕಣ್ಣ ಮುಂದೆ । ಮಾನವರು ಇಲ್ಲದಾಗ ಮೌನವಿಲ್ಲ ಮಂತ್ರವಿಲ್ಲ ॥ ಜ್ಞಾನವಾ ಪೇಳುವೆ ಪೋಗಿ ಧನಗಳನ್ನೂ ಕೊಟ್ಟವರಿಗೆ । ಧ್ಯಾನಿಸಾದೆ ಹೊಟ್ಟೆಯನ್ನು ಪೊರವೆ ನಾನು ನಿನ್ನ ಮರೆವೆ ॥ ೩ ॥ ಅಂಬುವರನಾನರಿಯೆ ಕುಟುಂಬವನ್ನು ಸಲಹಲೋಸುಗ । ತಿಂಬೆ ಹೀನರ ಮನೆಯೊಳನ್ನವ ನಂಬದೆ ನಿನ್ನ ಚರಣವನ್ನು ॥ ಹಂಬಲಿಸಿ ವಿಷಯಂಗಳಿಗೆ ಡಂಭನಾಗಿ ಕೆಟ್ಟೆ ವೃಥಾ । ಕುಂಭಿಣಿಗೆ ಭಾರವಾದೆನು ಕಂಬುಕಂಧರ ನಿನ್ನ ನೆನೆಯದೆ ॥ ೪ ॥ ಓದಿ ಮರುಳಾದೆನಯ್ಯ ಓದಿನ ಮಾತ್ರಕೆ ಸಭೆಯೊಳು । ವಾದಿಸುವೆ ವೇದಶಾಸ್ತ್ರಉಪನ್ಯಾಸಂಗಳನು ಮಾಡಿ ॥ ಕ್ರೋಧರಹಿತರಾಗಿ ಅವರು ಕೊಡಲು ಕೊಂಡಾ

ಡುವೆನು । ಆದರಿಸದಿದ್ದರಿನ್ನ ಬೈದು ಬಹೆನು ಖಿನ್ನನಾಗಿ ॥ ೫ ॥ ದೇಶದೇಶಂಗಳಿಗೆ ಧನದಾಶೆಗಾಗಿ ಪೋಗಿಪೋಗಿ । ಬೇಸರಾವೆ ಕಂಡವರನು ಕಾಡಿ ಬೇಡಿ ಬಳಲಿಸಿವೆ ॥ ಕಾಸಿನ ಲಾಭವ ಕಾಣೆ ಘಾಸಿಯಾದೆನಯ್ಯ ಶ್ರೀನಿವಾಸ ನಿನ್ನ ಪೂಜಿಸದೆ ಮೋಸಹೋದೆನಯ್ಯ ನಾನು ॥ ೬ ॥ ವೃದ್ಧನಾದೆನು ಹಲ್ಗಳಿಲ್ಲ ಬಿದ್ದವು ಕಣ್ ಕಾಣಬಾರದು । ಬಿದ್ದೆ ನಿನ್ನ ಪಾದಗಳಿಗೆ ಉದ್ಧರಿಸೊ ಹಯವದನ ॥ ತಿದ್ದಿ ಮನವ ನಿನ್ನ ಪಾದಪದ್ಮವ ನೆನೆವಂತೆ ಮಾಡೊ । ಪೊದ್ದಿದವರ ಪೊರೆವ ಕರುಣಾ ಅಬ್ಧಿ ನೀನೆ ಅನಾಥಬಂಧೋ ॥ ೭ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೯೧. ರಾಗ ನಾಟಿ, ಝಂಪೆತಾಳ.

ಜಯ ಮತ್ಸ್ಯ ಕೂರ್ಮ ವರಾಹ ನಾರಸಿಂಹ ಜಯ । ಜಯಜಯ ವಾಮನ ತ್ರಿವಿಕ್ರಮನೆ । ಜಯ ಪರಶುರಾಮ ರಘುರಾಮ ಜಾನಕಿರಮಣ । ಜಯ ವೃಷ್ಣಿಕುಲರನ್ನ । ಜಯ ಬೌದ್ಧ ಖಳಜನಮೋಹನ್ನ ಮಹಾಮಹಿಮ । ಜಯ ಜನನಮರಣವಿದೂರ । ಜಯ ಕಲ್ಕಿಯಾಗಿ ಕಲಿಯನೆ ಗೆಲಿದ ದೇವ ಜಯ । ಜಯ ರಾಮ ಪುಣ್ಯಶ್ರೀರಾಮ । ಜಯ ಬದರಿಕಾಶ್ರಮದ ನಾರಾಯಣನೆ ಜಯ । ಜಯ ಬಾದರಾಯಣ ಪ್ರವೀಣ । ಜಯ ಪ್ರಯಾಗದಲಿಪ್ಪ ಮಾಧವನೆ ಜಯಜಯ । ಜಯ ಜಯ ಬಿಂದುಮಾಧವನೆ ಜಯ । ಜಗನ್ನಾಥ ಸಿಂಹಾದ್ರೀಶ ಜಯಜಯ । ಜಯ ಅಹೋಬಲನಾರಸಿಂಹ । ಜಯ ತಿರುಮಲರಾಯ ಕಾಂಚಿವರದರಾಜ । ಜಯ ರಂಗನಾಥ ಶ್ರುತಿಗಾಥಾ । ಜಯ ಸೇತುವಿನ ರಾಮ । ಜಯ ಪದ್ಮನಾಭ ಜಯ । ಜಯ ಮುದ್ದು ಉಡುಪಿನ ಕೃಷ್ಣ । ಜಯ ಸ್ವಾದೆಯಲಿ ಮೆರೆವ ತ್ರಿವಿಕ್ರಮರಾಯ । ಜಯ ದ್ವಾರವತಿಯ ಗೋವಿಂದ । ಜಯ ಪುಂಡರೀಕಮುನಿವರದ ವಿಠಲರಾಯ । ಜಯ ಗದಾಧರ ಗಯಾಧೀಶ । ಜಯ ವಾದಿರಾಜಪ್ರಿಯ ಹಯವದನ ಜಿತಕದನ । ಜಯ ಮಧ್ವಗುರುವರಾರಾಧ್ಯ ॥ ೧ ॥ ಶ್ರೀಃ ॥

## ೯೨. ರಾಗ ನವರೋಜು, ಮಟ್ಟೆತಾಳ.

ಚರಣಕಮಲವನ್ನು ನೆನೆವೆ ನಾ ॥ ಪಲ್ಲ ॥ ಚರಣಕಮಲವನ್ನು ನೆನೆವೆ ನಾ । ದುಃಖ । ದುರಿತರಾಶಿಗಳ ಸಂಹರಿಸುವನಾ ॥ ಅನುಪಲ್ಲ ॥ ಶ್ರುತಿಯನುದ್ಧರಿಸಿದ ಧೀರನ್ನ ಘನ । ಸಿಂಧು । ಮಥನಕೊದಗಿದ ಗಂಭೀರನ್ನ ॥ ಕ್ಷಿತಿಯನೆತ್ತಿದ ಬಲು ವೀರನ್ನ । ಶಿಶು । ಸ್ತುತಿಸೆ ರೂಪವ ತಾಳ್ದ ಶೂರನ್ನ ॥ ೧ ॥ ಇಂದ್ರನ್ನ ಧರೆಗೆ ನಿಲಿಸಿದನ್ನ । ತನ್ನ । ತಂದೆಯ ಮಾತು ಸಲಿಸಿದನ್ನ ॥ ಸಿಂಧು ಸೇತುವೆಯ ಬಂಧಿಸಿದನ್ನ । ವ್ರಜ । ದಿಂದುಮುಖಿಯರ ಪಾಲಿಸಿದನ್ನ ॥ ೨ ॥ ವಧುಗಳ ವ್ರತವ ಖಂಡಿಸಿದನ್ನ । ದುಷ್ಟ । ರುದಿಸಲು ತುದಿಯ ತುಂಡಿಸಿದನ್ನ ॥ ಇದಿರಾದ ಖಳರ ಖಂಡಿಸಿದನ್ನ । ಹಯ । ವದನ ಮನ್ಮನದಿ ನಿಲಿಸಿದನ್ನ ॥ ೩ ॥ ಶ್ರೀಃ ॥

## ೯೩. ರಾಗ ಶಂಕರಾಭರಣ, ತ್ರಿಪುಟತಾಳ.

ಗೊಲ್ಲತಿಯರ ದೃಷ್ಟಿ ಮಗಗಾಯಿತಮ್ಮ । ಬಹು । ನಲ್ಲೆಯರು ಬಂದು ಮೆಚ್ಚಿ ಮಾತಾಡಿ ಹೋದರಮ್ಮ ॥ ಪಲ್ಲ ॥ ಅಂಗಕ್ಕೆ ಒಳಿತಿಲ್ಲವಮ್ಮ । ಕಂಗಳು ಮುಚ್ಚಲೊಲ್ಲವಮ್ಮ । ಹೆಂಗಳ ನೋಡುತಲೆ ಚಿಟ್ಟೆಕ್ಕಿದನಮ್ಮ ॥ ತಂಗಿ ನೀರುಯೆರದೇನಮ್ಮ । ತುಂಗಗಾತ್ರ ಎದ್ದು ನಮ್ಮ । ಭಂಗ ಪಡಿಸುತ ಬಾಯ ತೆರೆದನಮ್ಮ ॥ ೧ ॥ ನೀನು ಮಯ್ಯ ನೋಡಮ್ಮ । ತನುವು ಕಿರಿದಾಯಿತಮ್ಮ । ಮಾನವ ಕೊಡದೆ ತಾಯ ನೋಡನಮ್ಮ ॥ ಅನ್ನವಾ ಕೊಳಲೊಲ್ಲನಮ್ಮ । ಅತಿದುಃಖಿಯಾದ ದೈತ್ಯ । ಕನ್ನೆ ಮೊಲೆಹಾಲನುಂಡು ಬೆಳೆದನಲ್ಲಮ್ಮ ॥ ೨ ॥ ನಮ್ಮ ಮಾತು ಕೇಳನಮ್ಮ । ಒಮ್ಮೆಗೆ ಮೈಯೂದಿಯನಮ್ಮ । ಸುಮ್ಮನೆ ಘೋರಿಸುತಾನೆ ಮಲಗಲೊಲ್ಲ ॥ ಬೊಮ್ಮ ಜೆಟ್ಟಿಮಾಡಿದೆವಮ್ಮ । ಒಮ್ಮೆಗಿಷ್ಟೆಲ್ಲವಾಯಿತಮ್ಮ । ನಮ್ಮ ಹಯವದನಗಿನ್ನು ಅಂಜಿಕಿಲ್ಲವಮ್ಮ ॥ ೩ ॥ ಶ್ರೀಃ ॥

## ೯೪. ರಾಗ ಧನಾಸರಿ, ಅಟತಾಳ.

ಹರಿವಾಸರದುಪವಾಸದ ಫಲವು । ಕಂ । ಡವಂಗೆ ದೊರಕುವದೇ ॥ ॥ ಪಲ್ಲ ॥ ಹಿರಿದು ಜನ್ಮಗಳಲ್ಲಿ ಹರಿಯನಾರಾಧಿಸ । ಪರಮ ಭಾಗವತರ

ಭಕ್ತರಿಗಲ್ಲದೆ ॥ ಅನುಪಲ್ಲ ॥ ಸ್ನಾನ ಸಂಧ್ಯಾವ ಮೊದಲಾದ ಕರ್ಮವು ।
ನ್ಯೂನಾದ ಪಾಪಂಗಳು । ದೀನತ್ವದಿಂದ ಕುಜನರ ಕೈಹಿಡಿವಾದು । ದಾರ್
ನದ ಪಾಪಂಗಳು ॥ ಹೇಸು ಇರುವು ನೊಣ ಮೊದಲಾದ ಕ್ರಿಮಿಗಳ ಹಿಂ
ಸೆಯ ಪಾಪಂಗಳು । ಭಾನುಕೋಟಿಬಿಂಬ ಹಿಮವ ಓಡಿಸುವಂತೆ । ಅನಂತ
ನಾದಿಸ ವ್ರತಕೆ ಸಂಬಾರದು ॥ ೧ ॥ ಪರಸತಿಯರ ನೋಡಿ ಮನವಿಟ್ಟ
ಪಾಪ । ಪರದೂಷಣೆ ಮಾಡಿದ ಪಾಪಂಗಳು । ಪರಹಿಂಸೆಯ ಮಾಡಿ
ಪರವಸ್ತುಗಳ ಅಪಹರಿಸುವ ಪಾಪಂಗಳು ॥ ಪರಮಾತ್ಮನ ಹೊಗಳುವ
ನಾಲಿಗೆಯಲ್ಲಿ । ನರರ ಪೊಗಳಿದ ಪಾಪವು । ಹರಿಯ ಮರಿಯ ಕಂಡು
ಕರಿಯು ಓಡುವಂತೆ ದುರಿತಕೋಟಿಗಳ ಪರಿಹರಿಸುವ ಶ್ರೀ ॥ ೨ ॥ ಆಡುವ
ಅನೃತ ವಾಕ್ಯಗಳಿಂದ ಸನ್ನಿಹಿತವಾಗುವ ಪಾಪಂಗಳು । ನೋಡಿಕೊಳ್ಳ
ದಲೆ ದುರನ್ನವನುಂಬ ದುರ್ದಾನದ ಪಾಪಂಗಳು ॥ ಮಾಡಬಾರದ ಶ್ರೀಹರಿ
ದಿನ ಸ್ತ್ರೀಗೋಷ್ಠಿ ಮಾಡಿದ ಪಾಪಂಗಳು । ಕಾಡುಕಿಚ್ಚನು ಕಂಡ ಖಗ
ಮೃಗ ತತಿಯಂತೆ । ಓಡುವುದಕೆ ಸಂಯುಕ್ತವಲ್ಲದೇ ॥ ೩ ॥ ಮತ್ತೆ ಬಹಳ
ಪಾಪಂಗಳಿಗೆ ತಾ ಪಕ್ಷಪ್ರಾಯಶ್ಚಿತ್ತವು । ಉತ್ತಮವಾದ ವ್ರತಂಗಳಿಗೆ
ಇನ್ನು ಉತ್ತಮವಾಗಿಹದು ॥ ಚಿತ್ತಶುದ್ಧಿಯನಿತ್ತು ಜ್ಞಾನ ವೈರಾಗ್ಯಾದಿ
ಸಾಧನವೀಯುವದು । ಮುಕ್ತಿಗೆ ಸೋಪಾನವಾಗಿ ಭವಾಬ್ಧಿಯ ದಾಟಿಸಿ
ಹರಿಸನ್ನಿಧಿಗೆ ದಾರಿಯನೀವಾ ॥ ೪ ॥ ತೋರುವಾ ದಶಮಿದ್ವಾದಶಿಯ
ಸಂಪುಟಾಕಾರ ಹರಿದಿನವು । ಮೂರುದಿನದ ವ್ರತ ನಾಲ್ಕು ಹೊತ್ತಿನ ಆಹಾ
ರಂಗಳು ವರ್ಜಿತವು ॥ ಊರುದಾರಿಗಳನು ನಡೆವುದು ತಾಂಬೂಲ ಚರ್ವ
ಣಂಗಳು ವರ್ಜಿತವು । ನಾರಾಯಣನ ದಾಸರ ಸಂಗದೊಡನೆ ಜಾಗರ
ಮಾಡಿ ವ್ರತವನಾಚರಿಸುವಾ । ೫ ॥ ಪ್ರತಿವರುಷದಲಿ ಆಚರಿಸುವ
ತಾಯಿತಂದೆ ತಿಥಿಗಳೆಲ್ಲ ವರ್ಜವು । ಉತ್ತಮವಾದ ಶ್ರೀಹರಿದಿನದಿ ದೇವ
ತರ್ಪಣಂಗಳು ವರ್ಜವು ॥ ಸತತದಿ ಮಾಡುವ ಯಜ್ಞಪುರುಷಗೆ ಆಹುತಿ
ಗಳು ವರ್ಜವು । ಇತರ ಭೋಗ ಕೃತ್ಯಗಳನೆ ವರ್ಜಿತಮಾಡಿ ಈವ್ರತವ
ನಾಚರಿಸುವ ॥ ೬ ॥ ಹಲವು ವ್ರತಂಗಳ ಚರಿಸಿ ದಾನಂಗಳ ಹಲವು
ಮಾಡಿದರೇನು । ಹಲವು ಪುರಾಣಂಗಳು ಹಲವು ಶಾಸ್ತ್ರಂಗಳು ಹಲವು

ಕೇಳಿದರೇನು । ಹಲವು ದೇವಂಗಳೊಡೆಯನಾದ ಸಿರಿ । ಹಯವದನನಾದಿನಕೆ ಸರಿಬಾರದೂ ॥ ೬ ॥ ಶ್ರೀಃ ॥

೯೫. ರಾಗ ಕಾಂಬೋಧಿ. ಝಂಪೆತಾಳ.

ಹೊಸ ಕಪಿಯೆ ನೀನು ಬಂದದೇನ-ಕಾರಣವೆಂದು । ಅಸುರರನು ಅಳಿಯಬಂದೆನೊ ನಾನು ನಿನ್ನ । ವೈರಿ । ದಶರಥರಾಮನಾಳಿಂದ ॥ ಪಲ್ಲ ॥ ಧರೆಗೆ ಬಲ್ಲಿದ ಹನುಮನಾ ಕೇಳೆ ನಿನ್ನ ಅಸುರಪಡೆಗಳ ಮಡುಹ ಬಂದೆವನದಿ ॥ ಸಿರಿಯ ಕಿತ್ತಾಡಿ ನಿಂದೆ ನಿನ್ನ ಯೆಸೆವ ಪಾದದಲೊದಿಯಬಂದೆ । ಈ ದಶಶಿರವ ಕತ್ತರಿಸಿ ಯೆಸೆವ ರಾಮನ ಮಡದಿ ಪಸುಳೆ ಸೀತೆಯನರಸಲು ಬಂದೆ ॥ ೧ ॥ ಎನ್ನ ವೈರಿಗಳು ಇನ್ನಾರೆಂದು ರಾವಣನು । ಚನ್ನ ಕುಂಡಲ ಹನುಮನ ಕೇಳೆ । ಮುನ್ನ ವರಸಾಹಸಗಳಿಂದ ಅವರ ॥ ಪರ್ಣಶಾಲೆಯ ಹೊಕ್ಕು ಬಂದೆ ರಮೆಯ ಕನ್ಯೆ ಸೀತಾಂಗನೆಯ ತಂದೆ । ತನ್ನ ಬಿಲ್ಲು ತಾ ಹೊತ್ತು ತಿರ ಗೊದು ನಾ ಕಂಡೆ ಹಮ್ಮಿನ ಮಾತ್ಯಾತಕೊ ಕಪಿಯೆ ॥ ೨ ॥ ಕಚ್ಚಕಿತ್ತೀಯಲೇನು ಹಿಡಿದು ಯೆತ್ತಿ ಪಚ್ಚೆಬಿಡಚ್ಚನುರಿಮಾಡಿಡಿ ಕೊಲ್ಲಲೊ ನಿನ್ನ ಇಷ್ಟು । ಹೆಚ್ಚಿನಮಾತ್ಯಾಕೊ ನಿನಗೆ ಬಹಳ ॥ ಕಿಚ್ಚು ತುಂಬಿತು ಕಾಣೊ ಯೆನಗೆ ನಾನು ಹೆಚ್ಚು ಹೇಳುವೆನೊ ರಾಮರಿಗೆ । ಅಚ್ಚುತನ ಬಾಣಕೆ ವಿಾಸಲಾಗಿರು ಯೆರಡು ಹೊತ್ತು ನೀ ತಾಳುತಾಳು ಯೆಂದಾ ॥ ೩ ॥ ಹತ್ತು ಹಿಡಿವ ಕೈ ಪಂಜಲ್ಯಾಮವಿಲ್ಲ ನಾ ಹಿಡುವ ಕತ್ತಿ ಇಪ್ಪತ್ತುಕಾಣೊ ಕಪಿಯೆ । ಹತ್ತಿ ಕಡಿವೆನೊ ಬಾಹುದಂಡ ಬೆನ್ನಟ್ಟಿ ಬಡಿಯದೆ ಬಿಡೆನೊ ಕಂಡ್ಯ ನಿನ್ನ ॥ ಚಿತ್ತದಲಿ ತಿಳದುಕೊ ಕಂಡ್ಯ ಮತ್ತೆ ಮತ್ತೆ ನಾ ತಾಳಿ ಕೈಕಾಯಿದೆನಲದೆ ಬಾಯ । ಬತ್ತಿಸದಲ್ಲದೆ ಬಿಡುವೆನೆ ಕಪಿಯೆ ॥ ೪ ॥ ಮತ್ತೆ ರಾವಣನೆ ನಿನ್ನ ಹೊತ್ತಿಹ ಭೂಮಿ ಹಣತಿಸುತ್ತಣೆ ಸಮುದ್ರವೆಲ್ಲ ತೈಲ । ಒತ್ತಿ ಹಿಡಿವಳು ಸೀತೆ ದೀಪ ನಮ್ಮ ಚಿತ್ತದೊಲ್ಲಭನ ಪ್ರತಾಪ ॥ ಲಂಕಾಪಟ್ಟಣವ ಸುಡುವಂಥ ಶಾಪ । ಹತ್ತು ತಲೆ ನಿನ್ನ ಸಹ ಕೂಡಿ ಬಂದು ತಾ ಸುತ್ತಿ ಬೀಳೊದು । ದೀಪದೊಳಗೆ ॥ । ೫ ॥ ಮುನ್ನೂರ ಮೂವತ್ತು ಕೋಟಿ ದೇವತೆಗಳನು ಇನ್ನು ಶೆರೆಯೊಳ

ಟ್ಟಿಹನೋ ಕಪಿಯು । ಎನ್ನ ಮೇಲೆ ದಂಡೆತ್ತಿ ಬಾಹನ್ಯಾರು ಈಗ ಯೆನ್ನ ಸಾಹಸಕೆ ಈಡ್ಯಾರು ನೀನು ॥ ಎನ್ನ ಮನೆ ಭಂಡಾರ ನೋಡೊ ಮುನ್ನ ಹಣೆಯಲಿ ಬರವ ವಿಧಿ ಕಾಲಮಣಿಯಾಗಿ । ಬೆನ್ನುಕೊಟ್ಟಿಹ ಪರಿಯು ನೋಡೋ ॥ ೬ ॥ ಎನ್ನ ಸ್ವಾಮಿಯು ತಾನು ವಾಲಿಯು ಕೊಂದನು । ಇನ್ನು ಸುಗ್ರೀವಗೊಲಿದು ಪದವಿತ್ತು ನಿನ್ನ ಕೊಂಡ್ಯೊದು ಅವರು ತಂದು ॥ ಚಿನ್ನದ ತೊಟ್ಟಿಲಿಗೆ ಕಟ್ಟಿಪರು ನಿನ್ನ ಹೊನ್ನು ದುಂಬಿ ಯೆಂದಾಡಿಸಿದರು ನಿನ್ನ । ಶಿರತರಿದು ವಿಭೀಷಣಗೂರು ಕೊಡುವದಕ್ಕೆ ಯೆನ್ನೊಡೆಯ ಬರುತಾನೆ ತಾಳೊ ಯೆಂದಾ ॥ ೭ ॥ ಇಷ್ಟು ತುಚ್ಛದ ಮಾತು ಇವಗೇಕೆ ಹಿಡಿತಂದು ಕಿಚ್ಚು । ಕಟ್ಟಿರಿ ಬಾಲಕೆ ಯೆಂದ ಸುತ್ತಿದರು ಸೀರೆಗಳ ಪರದು ಯೆಂಭತ್ತು ಖಂಡಗ ತೈಲವೆರದು ಕ್ಷಣಕ್ಕೆ ಹೆಚ್ಚಿ ಮುಂದಕೆ ಬಾಲ ನಡದು ॥ ಹತ್ತಿತು ಮೊದಲಾಗಿ ಅಸುರನ ಗಡ್ಡ ಸಹಿತಾತಾ । ಸುಟ್ಟು ಬೂದಿಯು ಮಾಡಿದ ಪುರವಾ ॥ ೮ ॥ ಆಸುರನೆಲ್ಲರ ಅಳುಹಿ ಪುರವನೆಲ್ಲವ ಸುಟ್ಟು । ಬೆಪನೆ ಅಂಬುಧಿಯು ದಾಟಿ ಬಂದ ಅಲ್ಲಿಯು ಚಕ್ರತೀರ್ಥದಲಿ ನಿಂದಾ ॥ ಪೂಜಿತನಾಗಿ ಪಂಪಾಪುರ ಸೇರಿದ ನಿಜಭಕ್ತ ಯಂತ್ರೋದ್ಧಾರನೆಂದಾ । ಅಸಮ ಹಯವದನ ದಶರಥರಾಮನ ಭಕ್ತ ವಿಸುಹ ಮುಖ್ಯಪ್ರಾಣನು ಮೆರೆದಾ ॥ ೯ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬. ರಾಗ ಆನಂದಭೈರವಿ, ಅಟತಾಳ.

ವೇಣುನಾದಪ್ರಿಯ । ಗೋಪಾಲಕೃಷ್ಣ । ವೇಣುನಾದಪ್ರಿಯ ॥ ॥ ಪಲ್ಲ ॥ ವೇಣುನಾದವಿನೋದ ಮುಕುಂದ । ಗಾನವಿನೋದ ಶೃಂಗಾರ ಗೋಪಾಲ ॥ ಅನುಪಲ್ಲ ॥ ವಂದಿತಚರಣಾ ವಸುಧೇಯಾಭರಣಾ । ಇಂದಿರಾರಮಣಾ ಇನಕೋಟಿತೇಜಾ ॥ ಮಂದರಧರ ಗೋವಿಂದ ಮುಕುಂದ । ಸಿಂಧುಶಯನ ಹರಿ ಕಂದರ್ಪಜನಕಾ । ೧ ॥ ನವನೀತಚೋರಾ ನಂದಕುಮಾರಾ । ಭುವನೈಕವೀರಾ ಬುದ್ಧಿವಿಸ್ತಾರಾ ॥ ರವಿಕೋಟಿತೇಜಾ ರಘುವಂಶರಾಜಾ । ದಿವಿಜವಂದಿತ ದನುಜಾರಿ ಗೋಪಾಲಾ ॥ ೨ ॥

ಪರಮದಯಾಳೂ ಪಾವನಮೂರ್ತೀ । ವರಕೀರ್ತಿಹಾರಾ ಶೃಂಗಾರ ಲೋಲಾ ॥ ಉರಗೇಂದ್ರಶಯನಾ ವರಹಯವದನಾ । ಶರಣಾರಕ್ಷಕ ಪಾಹಿ ಕೋದಂಡರಾಮಾ ॥ ೩ ॥ ಶ್ರೀಃ ॥

### ೯೭. ರಾಗ ಭೂಪಾಳಿ, ಏಕತಾಳ.

ಕೃಷ್ಣ ಕರಿಯ ಕಾಯ್ದ ಕರುಣಿ ಜಿಷ್ಣುಸಖನೆ ಕೃಷ್ಣನೆ ॥ ಪಲ್ಲ ॥ ಕೃಷ್ಣ ಪೊರೆಯೊ ಯೆನ್ನ ವಿಷಯ । ತೃಷ್ಣೆಯಿಂ ಸಾಯಲೆ ದಮ್ಮಯ್ಯ ॥ ಅನುಪಲ್ಲ ॥ ಹಿಂದೆ ಮಾಡಿದ ಕರ್ಮವಶವಿಯೆಂದಿಗೆ ಸವರುವೆನೊ । ಗೋವಿಂದ ನಿನ್ನ ಕರುಣಸುಧೆ ಇನ್ನೆಂದು ಪಡೆದು ಸುಖಿಪೆನೋ ॥ ಇಂದು ಮಾಡಿದ ಅಘಗಳು ಬಲುದಂದುಗಕೊಳಗಾದೆ ನೀನು । ಕುಂದು ಕುಜನ ದೂರ ನಿನ್ನ ಕಂದನೆಂದು ಸಲಹೊ ತಂದೆ ॥ ೧ ॥ ಕಾಮವೆನ್ನ ಕಮಲನಾಭ ಸೀಮೆಗಾಣಲಿಯ್ಯದೊ ನಿ । ಸ್ತೋಮ ಮೋಹವು ಕ್ರೋಧ ಯೆನ್ನ ಪಾಮರಾ ನಡುಗಿಸುತಿದೆ ॥ ಭ್ರಾಮಿತನಾದೆ ಬಲು ಪ್ರೇಮವ ತಪ್ಪಿಸಿ ಸುರಕ್ಷಾನು ಹೇ ದೈವ ಯೆನ್ನ । ಆಮಹಾ ಭಯವ ನಿವಾರಿಸೋ ॥ ೨ ॥ ಸುಖದುಃಖ ಜೀವನಕ್ಕೆ ಕಕ್ಕು ಬಕ್ಕುಭಯದ ಬೇಸ ॥ ರಕ್ಕೆ ಬಿಡದೆ ಬಿಡದೆ ನಿನ್ನ ರಕ್ಷಮಾಡಲಿಯ್ಯದೊ ॥ ಚಿಕ್ಕತನದಿ ಸಿಕ್ಕಿ ದುರ್ವಿಷಯದಿ ನೊಂದೆ ವ್ಯೈ । ಯಿಕ್ಕದಂತೆ ಹಯವದನ ದಕ್ಕಿಸೆನ್ನ ಅನುದಿನಾ ॥ ೩ ॥

### ೯೮. ರಾಗ ಸೌರಾಷ್ಟ್ರ, ಅಟತಾಳ.

ಶರಣಾ ಶರಣಾ ॥ ಪಲ್ಲ ॥ ಶರಣಾ ಶ್ರೀವೈಕುಂಠನಾಯಕ । ಶರಣಾ ಶ್ರೀಪುರುಷೋತ್ತಮಾ ॥ ಶರಣಾ ಶ್ರೀಧರ ಗರುಡವಾಹನ । ಶರಣಾ ವೆಂಕಟನಾಯಕ ॥ ೧ ॥ ಆದಿದೇವ ಮುನೀಂದ್ರವಂದಿತ । ಸಾಧುಸುರಗಣ ಸೇವಿತ ॥ ವೇದವೇದ್ಯವಿರಿಂಚಿಸನ್ನುತ । ಶ್ರೀದಶ್ರೀವೆಂಕಟೇಶ ನಮೋ ॥ ೨ ॥ ಶರಣಾ ಸುರಮುನಿಹೃದಯಪಾಲಕ । ಶರಣಾ ಭಕ್ತರ ರಕ್ಷಕ ॥ ಶರಣಾ ಶ್ರೀಹಯವದನಮೌಕ್ತಿಕ । ಶರಣಾ ಓಂಕಾರ ನಾಮಕ ॥ ೩ ॥ ಶ್ರೀಃ ॥

### ೯೯. ರಾಗ ಕಾಪಿ, ಆದಿತಾಳ.

ಬಾರೋ ಮುರಾರೇ । ಬಾಲಕ ಶೌರೇ ॥ ಪಲ್ಲ ॥ ಸಾರವಿಚಾರ । ಸಂತೋಷ ಧೀರ ॥ ಅನುಪಲ್ಲ ॥ ಊಟಕ್ಕೆ ಯೇಳೊ । ಮಂಜುಳದೋಳೊ ॥

ಆಟಕ್ಕೆ ಯೋಳೊ । ಶ್ರೀಕೃಷ್ಣ ಕೃಪಾಳೊ ॥ ೧ ॥ ಅರುಣಾಬ್ಜಚರಣ । ಶರದಿಂದುವದನ ॥ ಪರಮಪಿತರಣ । ಪನ್ನಗಶಯನ ॥ ೨ ॥ ಅರವಿಂದನಯನ । ಕೌಸ್ತುಭಾಭರಣ ॥ ವರಯದುಸದನ । ಶ್ರೀಹಯವದನ ॥ ೩ ॥

೧೦೦. ರಾಗ ಆನಂದಭೈರವಿ, ತ್ರಿಪುಟತಾಳ.

ಕುಣಿದಾಡೊ । ರಂಗ ನಲಿದಾಡೊ ॥ ಪಲ್ಲ ॥ ಕುಣಿದಾಡೊ ಕುಂದಣದ ಸರಳಿ । ನಲಿದಾಡೊ ಮಾಣಿಕದ ಹರಳಿ ॥ ಕುಣಿದಾಡೊ ॥ ಅನುಪಲ್ಲ ॥ ಪತಿಶಾಪದಿ ಶಿಲೆಯಾದಗೌತಮ । ಸತಿಯ ಮೆಟ್ಟಿ ಪೆಣ್ಣ ಮಾಡಿ ॥ ಅತಿದಿವ್ಯ ಶ್ರೀಚರಣಾರವಿಂದಗತಿ । ಗತಿಯಿಂದಲಿ ದಿಧ್ಧಿಮಿಕೆನ್ನುತ ॥ ಕುಣಿದಾಡೊ ॥ ೧ ॥ ಗಕ್ಕಸದಿಂ ಶಕಟಾಸುರನ । ಸೊಕ್ಕ ಮುರಿದು ಬಂಡಿಯ ನೊದೆದು ॥ ಚೊಕ್ಕ ಶ್ರೀಚರಣಾರವಿಂದ । ಧಿಕ್ಕಿಟ ಧಿಮಿಕಿಟ ಝುಂಕಿಟವೆನ್ನುತ ॥ ಕುಣಿದಾಡೊ ॥ ೨ ॥ ಬಲಿಯ ಮೆಟ್ಟಿ ಕಾಳಿಂಗನ ಹೆಡೆಯ । ತುಳಿದು ನಾಟ್ಯವನಾಡಿ ॥ ಚೆಲುವ ಶ್ರೀಹಯವದನ ನಿಮ್ಮ । ಘಲಿಘಲಿ ಗೆಜ್ಜೆ ಘಿಲುಘಿಲುಕೆನ್ನುತ ॥ ಕುಣಿದಾಡೊ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೦೧. ರಾಗ ಯದುಕುಲಕಾಂಬೋಧಿ, ಝಂಪೆತಾಳ.

ಇಷ್ಟು ದಯವುಳ್ಳವನ ಯಾಕೆ ಬರಬೇಡೆಂದಿ ಇಷ್ಟು ನಿರ್ದಯಳೆ ನೀನು ॥ ಪಲ್ಲ ॥ ಇನ್ನೆಲ್ಲಿ ಪೋಗಲೆ ರತಿಯಿಲ್ಲದಿದ್ದರೆ ನಿನಗೆ ಪೂಮಾಲೆ ತಾಯೆನೆ । ಸಣ್ಣಕಮಲದಲ್ಲೈದು ಬಣ್ಣದ ಗಿಣಿ ಬರೆದು ಸಣ್ಣ ಶೀರೆಯ ಕೊಡುವೆನೆ ॥ ಕಣ್ಣಿಗೆ ಪ್ರಿಯವಾದ ಕಮಲಮಯ ಕುಪ್ಪಸವ ಕರೆದು ಕೈಯಲಿ ಕೊಡುವೆನೆ । ಬಿನ್ನಣದಿಂದಲಿ ಬಗೆಬಗೆಯಲಿ ನಿನಗೆ ಬಾಯ ಮುದ್ದನು ಕೊಡುವೆನೆ । ಸಖಿಯೆ ॥ ೧ ॥ ಕಳಿಯಡಿಕೆ ಹುಡುಕು ಕರ್ಪೂರದ ಕಾಚಿನ ಗುಳಿಗೆ ಕೈತುಂಬ ಕರದೀವೆನೆ । ಇಂಥ । ಎಳೆಮಾವಿನಂತೆ ತಳಿರು ಸುಳಿಗರೆವೆ ರುಮಾಲೆ ॥ ತಲೆಯಲ್ಲಿ ಸುತ್ತಿ ಬಾಹೆನೆ ಥಳಥಳಿಪನ । ಎಲುಗರಿ ಮುತ್ತಿನ ತೂರಾಯವ ಸಿಕ್ಕಿ ತರುಣಿ ನಿಲ್ಲಲಿ ಬಾಹೆನೆ ।

ಸಖಿಯೆ ॥ ೨ ॥ ಉರುಟಾಣಿ ಮುತ್ತುಗಳುಚಿತವಾಗಿದೆ ನಿನ್ನ । ಉರುಟು ಕುಚಗಳ ಪಿಡಿವೆನೆ । ಮುದದಿಂದ ನಿನ್ನ ಮುಖಕಿರು ಬೆವರನೆ ॥ ವರಸಿ ಕಸ್ತೂರಿತಿಲಕವನಿಡುವೆನೆ । ಸಿರಿಯರಸ ಹಯವದನರಂಗನ । ಚರಣವನು ನೆರನಂಬಿ ಭಜಿಸು ಸಖಿಯೆ । ಸುಖಿಯೆ ॥ ೩ ॥ ಶ್ರೀಃ ॥

## ೧೦೨. ರಾಗ ತೋಡಿ, ತ್ರಿಪುಟತಾಳ.

ಗೋವಿಂದ ಗೋಪಾಲ ಗೋಪಿಕಾವಲ್ಲಭ । ಗೋವರ್ಧನೋದ್ಧಾರಕ ॥ ಪಲ್ಲ ॥ ನಾರಾಯಣಾಚ್ಯುತ ನರಮೃಗರೂಪ । ಶ್ರೀಪತಿ ಶೌರಿ ಹರಿ ॥ ವಾರಿಜೋದ್ಭವವಂದ್ಯ ವಂದಿತಚಾರಿತ್ರ । ಪುರಮರ್ದನ ಮಿತ್ರ ಪರಮಪವಿತ್ರ ॥ ೧ ॥ ಗರುಡತುರಗಗಮನ ಕಲ್ಯಾಣಗುಣಗಣ । ನಿರುಪಮಲಾವಣ್ಯ ॥ ನಿರ್ಮಲಶರಣ್ಯ ಪರಮಮುನಿವರೇಣ್ಯ । ಭಕ್ತಲೋಕಕಾರುಣ್ಯ ॥ ೨ ॥ ಇನಶಶಿಲೋಚನ ಇಂದುನಿಭಾನನ । ಯೆನುತ ಕುಂಡಲನಾದನ ॥ ಕನಕಮಯವಾಸನ ಘನಪಾಪನಾಶನ । ಯೆನುತ ಕುಂಡಲನಾದ ವೇಣುನಾದ ಹಯವದನ ॥ ೩ ॥ ಶ್ರೀಃ ॥

## ೧೦೩. ರಾಗ ಆನಂದಭೈರವಿ, ರೂಪಕತಾಳ.

ನಾರಾಯಣ ನಾರಾಯಣ ನಾರಾಯಣ ನಳಿನೋದರ । ನಾರದಪ್ರಿಯನಾಮ ಜಯ ನಾರಾಯಣ ನರಕಾಂತಕ ॥ ಪಲ್ಲ ॥ ಸುರಸಂಜಯ ಸುಖಕಾರಣ ದಿತಿಜಾಂತಕ ದೀನಶರಣ ॥ ಪರಾತ್ಪರ ಪಾಂಡವಪ್ರಿಯ ಪರಿಪೂರ್ಣ ಪರಮಜಯ ॥ ೧ ॥ ಅಘಕುಲವನದಾವಾನಲ ಅಗಣಿತಗುಣಗಣನಿರ್ಮಲ ॥ ತ್ರಿಗುಣಾತೀತ ತ್ರಿಭುವನತ್ರಿದಶೇಶ್ವರವಂದ್ಯ ಜಯ ॥ ॥ ೨ ॥ ಅತಿಮೋಹನ ಚರಿತ ನಮೋ ಅತಿಸದ್ಗುಣಭರಿತ ನಮೋ ॥ ಹತಕಲ್ಮಷ ಹಯವದನ ಹರಿಹಯರಿಪುಹರಣ ಜಯ ॥ ೩ ॥ ಶ್ರೀಃ ॥

## ೧೦೪. ರಾಗ ಆನಂದಭೈರವಿ, ತ್ರಿಪುಟತಾಳ.

ರಂಗ ನಿನಗಾರೇನೆಂದರು । ಮರೆತು ನಿದ್ರೆಗೈದೆಯೊ ನೀ ಮಾಧವಸ್ವಾಮಿ । ರಂಗ ನಿನಗಾರೇನೆಂದರು ॥ ಪಲ್ಲ ॥ ಬಿಕ್ಕಿಬಿಕ್ಕಿಯಳುತ

ಬಂದ ಗೋಪಿಯು ಕಂಡ । ಉಕ್ಕಿ ಹರಿವ ಕಣ್ಣ ನೀರ ತೊಡದಳೆ ಶೋದೇ ॥ ಅಕ್ರೂರದಿಂದಲಿ ಮಗನ ಅತಿಮುದ್ದನಾಡಿ । ಮಕ್ಕಳ ಮಾಣಿಕ್ಯವೆ ನೀ ಮನೆಯೊಳಗಾಡೈ ॥ ೧ ॥ ಹಳ್ಳಿಯ ಮಕ್ಕಳು ಯೆನ್ನ ಬೈದರಮ್ಮಯ್ಯ । ಕಳ್ಳನೆಂದು ಯೆನ್ನಕೂಡೆ ಆಡಲೊಲ್ಲರು ॥ ಮೆಲ್ಲನೆ ಬೈಯುತ್ತ ಬರಲು ಕಲ್ಲಿಲಿಟ್ಟರಮ್ಮಯ್ಯ । ಅಲ್ಲಿಂದಂಜಿ ಅಳುತ ನಾನು ಓಡುತ ಬಂದೆ ॥ ೨ ॥ ಬಾಗಿಲ ಗೊಲ್ಲರು ಗೋಪ ಗೋಪಿಯರೆಲ್ಲ । ಹಗಲು ಕಳ್ಳ ಹಾಲುಬೆಣ್ಣೆ ಚೋರನೆಂದರು ॥ ಮಗುವೆಂದೆನ್ನಿಸಿಕೊಂಡು ಮನೆಯೊಳಗಾಡೈ । ಹೋಗುನ್ನಂತಲುಡುಪಿಯಲ್ಲಿ ಮುದ್ದು ಹಯವದನರಾಯ ॥ ೩ ॥

## ೧೦೫. ರಾಗ ಕಲ್ಯಾಣಿ, ಆದಿತಾಳ.

ಏನು ಬಂದಿ ಜೀವವೆ ಈಶರೀರದೊಳು ವ್ಯರ್ಥವಾಗಿ ॥ ಪಲ್ಲ ॥ ದಾನವು ಮಾಡಲಿಲ್ಲ ದಯಾಧರ್ಮಗಳು ಮೊದಲೆ ಇಲ್ಲ । ಜ್ಞಾನದಿಂದ ಹರಿಪೂಜೆ ಮಾಡಲಿಲ್ಲ ॥ ಜ್ಞಾನಿ ಸುಜ್ಞಾನಿಗಳ ಸನ್ನಿಧಿಯೊಳು ಇರಲಿಲ್ಲ । ನಿರ್ಮಲಗೃಹದೊಳು ಒಂದು ದಿವಸ ಬಾಳಲಿಲ್ಲ ॥ ೧ ॥ ಸತಿಯು ಪುರುಷರು ಸಂತೋಷದೊಳು ಇರಲಿಲ್ಲ । ಯತಿಯಾಗಿ ತೀರ್ಥಯಾತ್ರೆ ಮಾಡಲಿಲ್ಲ ॥ ಶ್ರುತಿಯು ಶಾಸ್ತ್ರಪುರಾಣವ ಕಿವಿಗೊಟ್ಟು ಕೇಳಲಿಲ್ಲ । ವ್ರತವಹ ದಿನ ಬಂತು ಬರಿದೆ ಮುಪ್ಪಾದೆನಲ್ಲ ॥ ೨ ॥ ಉಂಡು ಉಟ್ಟು ತೊಟ್ಟುಕೊಂಡು ಸರ್ವವಿಯೆಲ್ಲ ಕೊಂಡು । ಕೊಟ್ಟು ಹರಿಸೇವೆ ಮಾಡಲಿಲ್ಲ ॥ ದುಂದುಗದ ಸಂಸಾರಮಾಯಪಾಶೆಗೆ ಸಿಕ್ಕಿ । ದಂದುಗ ಬಡುತೀನೆ ಬಿಡಿಸೊ ಹಯವದನ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೦೬. ರಾಗ ರೇಗುಪ್ತಿ, ಆದಿತಾಳ.

ಗಾಡಿಗಾರ ಕೃಷ್ಣರನ್ನ ಬಿಡದಿರೊ ಯೆನ್ನ ॥ ಪಲ್ಲ ॥ ಬಡವರ ರಕ್ಷಿಪನ್ನ । ಅಡಿಗೆರಗುವೆ ನಿನ್ನ ॥ ಗಾಡಿಗಾರ ॥ ಅನುಪಲ್ಲ ॥ ಕಡಲಮಗಳ ಗಂಡ । ಒಡಲೊಳು ತೋರ್ದ ಜಾಂಡ ॥ ಪಿಡಿದ ಪಾಶದಂಡ ಕಾಂಡ ।

ಬೇಡಿದಿಷ್ಟದಾನಶೌಂಡ ॥ ೧ ॥ ವಾರಿಧಿಮಧ್ಯದಿ ಪುರ । ವರ ನಿರ್ಮಿಸಿದ ಧೀರ ॥ ಈರೇಳು ಭುವನೋದ್ಧಾರ । ನೀರದಶ್ಯಾಮಳಾಕಾರ ॥ ೨ ॥ ಮಂದಸ್ಮಿತಮುಖದಿಂದ । ಇಂದುಡುಪಿಯಲ್ಲಿ ನಿಂದ ॥ ನಂದಗೋಪಜನ ಕಂದ । ಬೃಂದಾರಕೇಶ ಮುಕುಂದ ॥ ೩ ॥ ಭಾವಗೊಲಿದಜೋದ್ಭವ । ಭವಸಂಜಾತರ ಕಾವ ॥ ಭವಾಬ್ಧಿತಾರಕ ದೇವ । ಭಜಿಸುವ ಭಕ್ತೋಜ್ಜೀವ ॥ ೪ ॥ ಮಧ್ವಮುನಿಪರೊಡೆಯ । ಶುದ್ಧ ಯತಿಗಣಪ್ರಿಯ ॥ ಶುದ್ಧವಾದಾಗಮಗೇಯ । ಮುದ್ದು ಹಯವದನರಾಯ ॥ ೫ ॥ ಶ್ರೀಃ ॥

## ೧೦೨. ರಾಗ ಕೇದಾರಗೌಳ, ಝಂಪೆತಾಳ.

ಮಾರನಯ್ಯನ ಚದುರನ ತಂದು । ತೋರು ವೆಂಕಟರಮಣನಾ ॥ ॥ ಪಲ್ಲ ॥ ನಲ್ಲ ನುಡಿದರೆ ನುಡಿದರಗಿಣಿಯನು ನಾಚಿಸುವ । ಚೆಲ್ವ ಮೊಗದಿಂ ಶಶಿಯನು ॥ ಗೆಲ್ವಭಾರಿಯ ಸೊಬಗ ತೋರಿ । ಪುಲ್ಲಬಾಣನ ಜರೆವನೋ ॥ ೧ ॥ ಕಂಬನಿಯ ತೊಡೆದು ತನ್ನ ಮೊಗವ । ಚುಂಬಿಸಲು ತರುಣಿ ತನ್ನ ಬಾಯ ॥ ತಾಂಬೂಲವನಿತ್ತು ಯೆನ್ನ ಮನ । ದ್ಹಂಬಲಸಲಿಸಲು ಪೂರ್ಣಾ ॥ ೨ ॥ ಇಂದೆನ್ನನಗಲಿದರೆ ಮನದ । ಕುಂದಬಿಡಿಸುವನದಾರೆ ॥ ಇಂದುಮುಖಿ ಕರದು ತಾರೆ ಹಯವದನ । ಬಂದ ಬೇಗದಲಿ ಸಾರೇ ॥ ೩ ॥

## ೧೦೩. ರಾಗ ರೇಗುಪ್ತಿ, ಮಟ್ಟಿತಾಳ.

ಮನ್ನಿಸೊ ಶ್ರೀವೆಂಕಟೇಶ । ಮಂಜುಗುಣಿಪುರವಾಸ ॥ ಸನ್ನುತಸದ್ಗುಣಪೂರ್ಣ ಸುಪ್ರಸನ್ನ ಹಯವದನ ॥ ಪಲ್ಲ ॥ ದೇಶದೇಶದಿಂದ ಬಂದ ಜನರಿಗೆ ಮುದದಿಂದ । ಲೇಸಿನ ವರವನೀವೆ ನಿರುತ ಕಾವೆ ॥ ಭಾಸುರಮೋಹನವೇಷ ಭಾನುಕೋಟಿಸುಪ್ರಕಾಶ । ಶ್ರೀಸತಿಯ ಪ್ರಾಣೇಶ ಶ್ರೀಶ್ರೀನಿವಾಸ ॥ ೧ ॥ ವಾರಿಧಿಯೊಳಗಾಡಿದೆ ಗಿರಿಯ ಬೆನ್ನಿಲೆತ್ತಿದೆ । ಭಾರವಹ ಧರೆಯ ತಂದೆ ದೈತ್ಯನ ಕೊಂದೆ ॥ ದುರುಳ ಬಲಿಯನು ಮೆಟ್ಟಿ ದೈತ್ಯನೃಪರನೆ ಕುಟ್ಟಿ । ತರಣಿಗಭಯವಿತ್ತೆ ತರುವ ಕಿತ್ತೆ ॥ ೨ ॥ ಪುರದ ನಾರಿಯರನ್ನು ಪಂಥದಿ ಗೆಲಿದೆ ನೀನು । ವರಕಲ್ಕಿಯಾಗಿ ತುರಗವನೇರಿ ಮೆರೆದೇ ॥ ವರದ ಪ್ರಸನ್ನ ಹಯವದನ ವೆಂಕಟರಾಯ । ಪೊರೆಯೊ ಎಂದೆಂದು ಎನ್ನ ಪುರುಷರನ್ನಾ ॥ ೩ ॥

## ೧೦೯. ರಾಗ ಕೇದಾರಗೌಳ, ಆದಿತಾಳ.

ತಂದು ತೋರೆ ಶ್ರೀಕೃಷ್ಣನ । ತಂದು ತೋರೆ ಬೇಗದಿ ಪೋಗಿ ನೀ ॥ ॥ ಪಲ್ಲ ॥ ಸಾಗರದೊಳಗಣ ಭೋಗಿ ॥ ಭೋಗದೊಳಗಿಪ್ಪ ಸೊಬಗು ಮಾರುತಿಯ ॥ ೧ ॥ ಸಾರಿದ ಸುಜನರ ಪಲಹುವ ಧೀರನ್ನ ॥ ನೀರೆ ನಿಗಮಸ್ತುತ್ಯನಿರ್ಮಲರೂಪನ ॥ ೨ ॥ ಮಂಗಳಮಾರುತಿ ಸಿರಿಹಯವದನನ್ನ ॥ ಸಂಗಿಸು ಯೆನ್ನೊಳು ರತಿಸುಖಮಯನ್ನ ॥ ೩ ॥ ಶ್ರೀಃ ॥

## ೧೧೦. ರಾಗ ಮುಖಾರಿ, ಮಟ್ಟೆತಾಳ.

ರಂಗನೇಕೆ ಬಾರ । ತಂಗಿ । ರಂಗನೇಕೆ ಬಾರ ॥ ಪಲ್ಲ ॥ ಮಂಗಳಮಹಿಮನ ದಿವ್ಯಾಂಗವ ಕಾಣದೆ ಯೆನ್ನ । ಕಂಗಳು ಕಂಗೆಡುತಿವೆ ॥ ರಂಗುಮಾಣಿಕ್ಯದುಂಗುರದಂಗುಲಿಯ ಸನ್ನೆಯಿಂದ ॥ ಪೊಂಗಳನೂದುವನ ತೋರೆ ರಮಣಿ ॥ ಅನುಪಲ್ಲ ॥ ತಿಂಗಳು ಮೂಡಿತು ಪಿಕ ಸಂಗೀತವ ತೊಡಗಿತು । ಭೃಂಗ ತನ್ನಂಗನೆಯರ ಸಂಗಡ ನಲಿದು ಬಂದ ॥ ಶೃಂಗಾರವನದ ಮೃದುತಂಗಾಳಿ ಬೀಸಿತು ನೋಡೇ ಆ । ನಂಗನೆಚ್ಚ ಬಾಣಾಂಗಳೆಂತೋ ಅಂತ ॥ ರಂಗವ ತಾಗಿದಡೆನ್ನ ಇಂಗಿತವರಿತು ದೇವೋ । ತ್ತುಂಗ ಕಾಯದಿರೆ ವುಳಿವಂಗವನ್ನು ಕಾಣೆವಮ್ಮ । ಪೆಂಗಳಿಗೆ ಬಂದ ಬಲುಭಂಗ ತನ್ನ ಬಲ್ಲವೆ ಸಾ । ರಂಗಾಕ್ಷಿ ಬೇಗವನ ತೋರೆ ರಮಣಿ ॥ ೧ ॥ ಹಾರಸರ ಉರದಲ್ಲಿ ಸಿಂದೇವಿ ಶ್ರೀವತ್ಸ । ಕೊರಳ ಪದಕ ಕೌಸ್ತುಭರತ್ನ । ಕರ್ಣಕುಂಡಲ ಸರಸಿಜಮುಖದಿ ಕ । ಸ್ತೂರಿತಿಲಕವೆಸೆಯೆ ಪರಿಮಳಿಸುವ ಪೂಮಾಲೆ ॥ ಮೆರೆಯೆ ಪೊಳೆವ ಪೀತಾಂಬರದ ಸುತ್ತಲೊಲಿವ । ಕಿರುಗೆಜ್ಜೆ ಮಣಿಮಯಕಾಂತಿ ಮಿಂಚುತಿರಲು । ಚರಣನೂಪುರ ಘಲಘಲಕೆಂದು ನಲಿವ ಶ್ರೀ । ಹರಿಯನ್ನು ಕರದುತಾರೆ ರಮಣಿ ॥ ॥ ೨ ॥ ಮಂದಜಾಸನನ ತಂದೆಯೆಂದೆನಿಪ ಗೋ । ವಿಂದನ ಕಂದರ್ಪವೃಂದಗಳನ್ನು । ಕಂದಿಸುವ ಕುಂದಿಲ್ಲದ ಸೌಂದರ್ಯ । ಸಂದೋಹದೊಳಗೊಂದೊಂದನಾರು ಬಲ್ಲರು ॥ ಎಂದೆಂದಿಗವನ ಹೊಂದಿಪ್ಪ ಇಂದಿರೆ ಇವನ ಗುಣ । ಸಾಂದ್ರ ಕಿರುಬೆರಳಿನ ಚಂದವ ನೋಡುತಾ । ನಂದ

ಸಿಂಧುವಿನೊಳು ಮುಳುಗಿಪ್ಪ। ಇಂದು ಹಯವದನಮುಕುಂದನ ಬೇಗೆನ್ನ ಮುಂದೆ ಇಂದುಮುಖಿ ಕರದುತಾರೆ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೧. ರಾಗ ರೇಗುಪ್ತಿ, ಝಂಪೆತಾಳ.

ನಂದಗೋಪನ ಕಂದ ನಾನು । ವೃಂದಾರಕೇಂದ್ರ ಖಳಕುಲ ಮರ್ದನ ॥ ಪಲ್ಲ ॥ ಎಂದೆಂದು ನನ್ನ ನಂಬಿದ ಭಕ್ತಜನರ ಸು । ತ್ತಿಂದ ಬಂದ ಕ್ಲೇಶಗಳ ಖಂಡಿಸಿ ॥ ತಂದೆ ಮಕ್ಕಳ ಪೊರೆದಂತೆ ಪಾಲಿಸುತಿಹೆ । ಕಂದರ್ಪನಾಣೆ ಇದು ಯೆನಗೆ ಬಿರುದು ॥ ೧ ॥ ಅಂದಂದು ಅವರು ಬೇಡಿದ ಇಷ್ಟಂಗಳನಿತ್ತೆ । ಸಂದೇಹವಿಲ್ಲ ಸಂತರ ಸಲಹಿದೆ ॥ ಮಂದ ಜನರೊಡನಾಡಿ ಮರುಳಾಗದಿರು ಮನುಜ । ಚಂದದಿಂದೆನ್ನ ಪೂಜೆಯನೆ ಮಾಡು ॥ ೨ ॥ ಇಂದ್ರ ಗರ್ವಿಸಲು ಅವನಿಗೆ ತಂದು ಸುರತರುವ । ನಂದನವನವ ಪೊಕ್ಕು ಕಿತ್ತು ತರಲು ॥ ಒಂದಾಗಿ ರಣಕೆ ಬಂದು ನಿಂದ ಮರರನು ಕರುಣ । ದಿಂದ ನಾ ಪಾಲಿಸಿದೆ ಭಕತರಿಗೆ ಬಂಧು ॥ ೩ ॥ ಬಂಧಿಸಿ ನೃಪರ ಬಳಲಿಸುವ ಬಾಹುಬಲದ ಜರಾ । ಸಂಧನ ಗದೆಯ ಘಾಯದಿ ಕೊಲಿಸಿದೆ ॥ ಅಂದವನ ದೆಸೆಯಿಂದ ನೊಂದ ರಾಯರುಗಳಿಗೆ । ಕುಂದದುಡುಗರೆಗಳನು ಕೊಡಿಸಿ ಮೆರೆದೆ ॥ ೪ ॥ ಅಂಧಂತಮವ ದಾಟಿ ಅನಂತಾಸನಕೆ ಪೋಗಿ । ವಂದು ಮುಹೂರ್ತದಲಿ ದ್ವಿಜಸುತರನು ತೋರಿದೆ ॥ ಸಿಂಧುವಿನೊಳಗೆ ದೈತ್ಯನ ಕೊಂದ ಸಾಂದೀಪನ । ನಂದನನ ಯಮನ ಪುರದಿಂದ ತಂದೆ ॥ ೫ ॥ ಇಂದುಮುಖಿ ಸಭೆಯಲ್ಲಿ ಕರೆಯಲಕ್ಷಯಾಂಬರ । ದಿಂದ ಲಜ್ಜೆಯ ಕಾಯ್ದ ರಮಣ ದೇವನ ॥ ಸಂಧಿಸಿ ಪಿತನನು ಕರಕೊಂಡು ಬಂದೆನುತ ಸಿ । ರ್ಬಂಧಗಳ ಬಿಡಿಸಿ ಪರೀಕ್ಷಿತನ ಪೊರೆದೆ ॥ ೬ ॥ ಹಿಂದೆ ಗಜೇಂದ್ರನಿಗೊದಗಿದವನಾರು ಪಿತ । ನಿಂದ ನೊಂದ ಪ್ರಹಲ್ಲಾದನ್ನ ಕಾಯ್ದವರು ದಾರು ॥ ಮಂದರಗಿರಿಯನೆತ್ತಿ ಸುರರಿಗೆ ಸುಧೆಯನುಣಿಸಿ । ಇಂದಿರೆಯನಾಳ್ದ ಹಯವದನ ರಾಯ ॥ ೭ ॥ ಶ್ರೀ ॥

೧೧೨. ರಾಗ ನೀಲಾಂಬರಿ, ಝಂಪೆತಾಳ.

ಅರಳಿದ ಕೆಂದಾವರೆಯ ಗರುವ ಧಿಕ್ಕರಿಸುವ । ಗರಿಯ ತಿಮ್ಮರಾಯನ ಚರಣವನು ಕಂಡೆನಾ ॥ ಪಲ್ಲ ॥ ಅರುಣತಳದಲಿಪ್ಪ ಅಂಕುಶ ಧ್ವಜವಜ್ರಾದಿ । ಸುರಶಿರೋರೇಖೆಗಳ ಸೊಬಗನು ಕಂಡೆನಾ ॥ ೧ ॥ ಬೆರಳು ಸಾಲ್ಗಳ ಮೇಲೆ ಬೇರೆ ಬೇರೆ ತೋರ್ಪುಭಯ ॥ ಸುರಮಣಿನಖಗಳ ಕಿರಣಗಳ ಕಂಡೆನಾ ॥ ೨ ॥ ಕಿರುಗೆಜ್ಜೆ ಕಡೆಯ ಹೆಜ್ಜೆಯ ಪ್ರಭೆಗಳನು ಕಂಡೆನಾ ॥ ಕರಿಯ ದಂತವ ಪೋಲ್ವ ಜಂಘೆಗಳ ಕಂಡೆನಾ ॥ ೩ ॥ ಎರಡು ರನ್ನದ ಕನ್ನಡಿಯ ತೆತ್ತಿಸಿದ ಪೋಲು ॥ ಮುರಹರನ ಮೋಹನ ಜಾನುದ್ವಯವ ಕಂಡೆನಾ ॥ ೪ ॥ ಉರುಟುಕದಳಿಯ ಕಂಬದಂತೆ ವರ್ತುಳವಾದ ॥ ಹರಿಯ ಪೀವರತೊಡೆಗಳ ಕಂಡೆ ಕನಸಿನಲೀ ॥ ೫ ॥ ವರಪೀತಾಂಬರಕಾಂತಿ ಕಿಂಕಿಣಿಜ್ವಾಲೆಗಳಿಂದ ॥ ಕರುಣಿ ವೆಂಕಟೇಶನ ಕಟಿಸ್ಥಳವ ಕಂಡೆನಾ ॥ ೬ ॥ ಕಿರುಡೊಳ್ಳಿನುದರದಾ ನಾಭಿಯ ತ್ರಿವಳಿ ಇಂ ॥ ದಿರೆಯನಪ್ಪಿಕೊಂಬ ಮಧ್ಯದ ಚೆಲುವ ಕಂಡೆನಾ ॥ ೭ ॥ ಕರಚತುಷ್ಟಯದಿ ಕಂಕಣ ಶಂಖಚಕ್ರಾದಿ ॥ ವರಅಭಯಗಳ ಕಂಡೆ ಕರ್ಣಕುಂಡಲವ ಕಂಡೆನಾ ॥ ೮ ॥ ಸಿರಿದೇವಿ ಸಿರಿವತ್ಸ ಕೊರಳ ಕೌಸ್ತುಭಹಾರ ಸರದಿ ॥ ಮಿಂಚುವ ವಿಶಾಲವುರಸ್ಥಳವ ಕಂಡೆನಾ ॥ ೯ ॥ ತ್ರಿಣಿಕೆಯಿಂದೊಪ್ಪುವ ಕಡೆದ ಶಂಖದಂತಿಪ್ಪ ॥ ಕರುಣಿ ವೆಂಕಟೇಶನ ಕಂಧರವ ಕಂಡೆನಾ ॥ ॥ ೧೦ ॥ ಕುರುಳು ಕೂದಲು ಪಾಲುಸಿಂಗಡಿಯಂತಿಪ್ಪ ॥ ಪುಬುರ್ ಕೂರ್ಮನಂದದಿ ಗಲ್ಲವ ಕಂಡೆನಾ ॥ ೧೧ ॥ ಶುಭಚುಬುಕಾಗ್ರದಿ ಸರಸಬಿಂಬಾಧರ ಸುಸ್ಮಿತ ನಾಸಾಪುಟದಿ । ಕಸ್ತೂರಿನಾಮ ಸರಸಿಜಗಳಿಂದೊಪ್ಪುವನಾ ॥ ೧೨ ॥ ಸಿರಿಮುಖವ ಕಂಡೆ ಹಯವದನವೆಂಕಟೇಶನ ॥ ಸಿರಿಕಿರೀಟವ ಕಂಡು ಕೃತಾರ್ಥನಾದೆನೂ ॥ ೧೩ ॥ ಪ್ರಃ ॥

೧೧೩. ರಾಗ ದೇಶಿ, ಏಕತಾಳ.

ಕೇಳಲೊಲ್ಲನೆ ಯೆನ್ನ ಮಾತನು ರಂಗ ॥ ಪಲ್ಲ ॥ ಕಾಳೀಮರ್ದನ ಕೃಷ್ಣಗೆ । ಹೇಳೀ ಗೋಪೆಮ್ಮ ಬುದ್ಧಿ ॥ ಅನುಪಲ್ಲ ॥ ಬಿಟ್ಟ ಕಣ್ಣಾನೆ

ಮುಚ್ಚಲೊಲ್ಲನೆ ದೊಡ್ಡ । ಬೆಟ್ಟಕ್ಕೆ ಬೆನ್ನಿತ್ತು ನಿಂತನೆ ಬಹು ॥ ಸಿಟ್ಟಲಿ ಕೋರೆಹಲ್ಲ ಕಿರಿದನೆ । ಗಟ್ಟಿ ಉಕ್ಕಿನ ಕಂಬವೊಡೆದು ಬಂದನೆ ರಂಗ ॥ ॥ ೧ ॥ ಮೂರಡಿಭೂಮಿಯ ಬೇಡಿ ಬಂದನೆ ತಾಯ । ಶಿರವ ಕಡಿಯಲಿಕೆ ಕೊಡಲಿ ತಂದನೆ ॥ ನಾರ ಸೀರೆಯನುಟ್ಟುಕೊಂಡನೆ ಬಹು । ಚೋರತನದಿಂದ ಹರವಿಹಾಲ ಕುಡಿದನೆ ಕೃಷ್ಣ ॥ ೨ ॥ ಬತ್ತಲೆನಾರಿಯರ ಅಪ್ಪಿದ ಕೃಷ್ಣ । ಉತ್ತಮ ಅಶ್ವವನೇರಿದ ॥ ಹತ್ತಾವತಾರವ ತೋರಿದ ದಿಟ್ಟ । ಮೂರ್ತಿ ನಮ್ಮ ಚೆಲುವ ಶ್ರೀಹಯವದನನ ॥ ೩ ॥

## ೧೧೪. ರಾಗ ರೇಗುಪ್ತಿ, ಆದಿತಾಳ.

ತಂದು ತೋರೆ ಶ್ರೀಮುಕುಂದನ ಗೋವಿಂದನ । ಎಂದೆಂದುಡು ಪಿಲಿ ನಿಂದನ ಗೋವಿಂದನ ॥ ಪಲ್ಲ ॥ ದಂಡಪಾಶಧರನು ಭೂಮಂಡಲದ ಮುನಿಗಳ । ಹೆಂಡರತ್ತ ಭಿಕ್ಷೆಯುಂಡನ ಚೆಲ್ವ ॥ ಕುಂಡಲಮಂಡಿತ ಗಂಡನ ಉ । ದ್ದಂಡ ಕಠೋರ ಪ್ರಚಂಡನ ಗೋವಿಂದನ ॥ ೧ ॥ ಹಾರ ಪದಕ ಕಂಕಣ ಕಿರುಗೆಜ್ಜೆ ವುಡು । ದಾರ ವೀರಪೆಂಡ್ಯೆಗಳಿಟ್ಟನ ತನ್ನ ॥ ಸೇರ್ದರಿಗಿಷ್ಟವ ಕೊಟ್ಟನ । ನೀರಸಜನರ ಬಿಟ್ಟನ ಗೋವಿಂದನ ॥ ೨ ॥ ಮಂದಹಾಸವೆಂಬ ನವಚಂದ್ರಿಕೆಯಿಂದೆಸವ ಮುಖ । ಇಂದುವಿನ ನೀರಜಾಕ್ಷನ ನವ ॥ ಚಂದನಚರ್ಚಿತವಕ್ಷನ । ಎಂದೆಂದು ಭಕ್ತರ ಪಕ್ಷನ ಗೋವಿಂದನ ॥ ೩ ॥ ಮಂದಜಾಂಡಾದಿಂದ್ರಮುಖ್ಯವೃಂದಾರಕರೊಡೆಯನ । ಇಂದಿರೆಯೊಪ್ಪುವ ತೋಳ್ಗಳ ಶುಭ ॥ ಕಂದಕ ಡ್ತ್ರಲಪಲ್ಲಳ । ಅಂದುಗೆ ಒಪ್ಪುವ ಕಾಲ್ಗಳ ಗೋವಿಂದನ ॥ ೪ ॥ ಇಂದು ಹಯವದನನ್ನ ಸಂದೇಹವ ಕಳೆಯುತ್ತ ಆ । ನಂದದಿಂದಿಲ್ಲಿಗೆ ಬಂದನ ॥ ಚಂದದಿ ವೇದವ ತಂದನ ಆ । ನಂದನ ರಾಣಿಯು ಕಂದನ ಗೋವಿಂದನ ॥ ೫ ॥ ಪ್ರೀ ॥

## ೧೧೫. ರಾಗ ಮುಖಾರಿ, ಮಟ್ಟತಾಳ

ಬಂದ ಶ್ರೀಕೃಷ್ಣ ನಲಿವುತ್ತ ನಸುನಗೆ । ಯಿಂದ ಬೇಗ ಯಶೋದೆಯಿದ್ದೆಡೆಗಾಗಿ ಬಂದ ಶ್ರೀಕೃಷ್ಣ ॥ ಪಲ್ಲ ॥ ಉದಯದೊಳಿದ್ದು ಮೊಸರ ಕಡಿವಾಗ ತನ್ನ । ಅದುಭುತ ಬಾಲಲೀಲೆಗಳ ತೋರಿ ॥ ಉದಧಿಶಯನ

ಜಲತುಳುಕಾಡುತಿರೆ ಕಂಡು । ಮದನನಯ್ಯನು ನಚ್ಚಿ ಬೆಣ್ಣೆಯ ಬೇಡುತ್ತಾ ॥ ೧ ॥ ಮಕ್ಕಳುಗಳ ಕೂಡಿ ಮನೆಮನೆಯೊಳಗಾಡಿ । ಮಿಕ್ಕು ಮೀರಿದ ರಕ್ಕಸರ ನೀಡ್ಯಾಡಿ ॥ ಅಕ್ಕರಿಂದಲೆ ತಾಯ ಮುಖವನೀಕ್ಷಿಸುತಲಿ । ಗಕ್ಕನೆ ಶಿರಗ ಪಿಡಿದು ಮೊಲೆಯ ಕೊಡೆನ್ನುತಾ ॥ ೨ ॥ ಕುರುಳು ಕೂದಲಿನ ಅರಳೆಲೆಮಾಗಾಯ । ಕೊರಳ ಪದಕಸರ ಯೆಸೆಯುತಿರೆ ॥ ಚರಣದಂದುಗೆ ಗೆಜ್ಜೆ ಘಲುಘಲೂ ಯೆನ್ನುತ । ಸಿರಿಯರಸ ಹಯವದನನೆಸಿಪ ಮೋಹನಾಂಗ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೬. ರಾಗ ಬಿಲಹರಿ, ಅಟತಾಳ.

ಸ್ತ್ರೀಯರೊಡನೆ ಸತ್ಯಭಾಮೆಯಾಡಿದ ಮಾತಿಗೆ ದೇವನುತ್ತರವ ಕೊಟ್ಟ ಕೇಳಿ ನೀವೆಲ್ಲ ॥ ಪಲ್ಲ ॥ ನಾರುವ ಮೈಯವನತ್ತ ಸಾರೊ ಮುಟ್ಟದಿರೊ ಯೆನ್ನ । ದೂರ ನಿಲ್ಲೊ ತಾರಾಮಲ್ಲ ಹೇ ರಂಗಧಾಮಾ ॥ ಸಾರಿ ಶ್ರುತಿಗಳ ತಂದು ನೀರಜಸಂಭವಗಿತ್ತೆ । ಧೀರಮತ್ಸ್ಯರೂಪ ಕಾಣೆ ಯೆಲೆ ಸತ್ಯಭಾಮೇ ॥ ೧ ॥ ಚಂದವಂತನಾಗಿ ಬಂದು ನಿಂದು ತೋರೊ ಕೈಗಳನ್ನೆ ಆ । ನಂದ ನಿನ್ನ ಬೆನ್ನಲಿಟ್ಟ ಕಾರಣವೇನೊ ॥ ಸಿಂಧುಮಥನವ ಮಾಡಿ ಅಂದು ಮಂದರ ಮುಳುಗಿ । ಬಂದು ನೆಗಹಿದ ಕೂರ್ಮ ಯೆಲೆ ಸತ್ಯಭಾಮೇ ॥ ೨ ॥ ನೋಡಿದರೆ ಮೈಯೊಳಗೆ ಮೂಡಿರುವ ರೋಮಗಳು । ಗಾಡಿಗಾರ ನೀನಾರಯ್ಯ ಹೇ ರಂಗಧಾಮಾ ॥ ಕ್ರೋಡರೂಪದಿಂದಿಳೆಯ ದಾಡೆಯ ಮೇಲೆತ್ತಿ ತಂದೆ । ಕಾಡ ವರಾಹನು ಕಾಣೆ ಯೆಲೆ ಸತ್ಯಭಾಮೇ ॥ ೩ ॥ ಮಾನುಷಂಗಳ ಮೇಲೇರಿ ನಲಿವನಂತೆ ಮೃಗರಾಜ । ನಾನಾವಿಧದೇನು ಹೇಳೊ ಹೇ ರಂಗಧಾಮಾ ॥ ಮಾನಿನಿ ಪ್ರಹ್ಲಾದನಿಗೆ ಮಾನಭಂಗಕ್ಕೊದಗಿದೆ ಧೀ । ರನಾರಸಿಂಹ ಕಾಣೆ ಯೆಲೆ ಸತ್ಯಭಾಮೇ ॥ ॥ ೪ ॥ ಧೊರೆತನವುಳ್ಳವನೆಂದು ಮರುಳುಗೊಂಡೆನಾ ನಿನಗೆ । ಕಿರುಕನೆಂದು ತಿಳಿಯದ್ಹೋದೆ ಹೇ ರಂಗಧಾಮಾ ॥ ತರಳೆ ಸುರರಿಗಾಗಿ ಬಲಿಯ ಪಾತಾಳಕ್ಕಿಳುಹಿ । ಗರುವ ವಾಮನ ಕಾಣೆ ಯೆಲೆ ಸತ್ಯಭಾಮೇ ॥ ೫ ॥

ಅಡವಿಯೊಳು ಕಟ್ಟಿಗೆಯ ಕಡಿವನಂತೆ ಕೊಡಲಿಯನ್ನು । ಪಿಡಿವದೇನೊ ಪುಣ್ಯಾವಾಸ ಹೇ ರಂಗಧಾಮಾ ॥ ಮಡುಹಿ ಕ್ಷತ್ರಿಯರೊಳು ಮಡದಿ ಸೇರ್ದ ಮಾತೆಗಾಗಿ । ಒಡೆಯನಾದ ಪರಶುರಾಮ ಯೆಲೆ ಸತ್ಯಭಾಮೆ ॥ ॥ ೬ ॥ ಊರ ಬಿಟ್ಟು ಅರಣ್ಯವ ಸೇರಿ ಮುನಿಗಳಂತಿಪ್ಪ । ನಾನಾವಿಧ ದೇನೊ ಪೇಳೊ ಹೇ ರಂಗಧಾಮಾ ॥ ಕ್ರೂರರಾವಣನ ಕೊಂದೆ ನಾರಿ ಸೀತೆಯನು ತಂದೆ । ಧೀರರಾಮಚಂದ್ರ ಕಾಣೆ ಯೆಲೆ ಸತ್ಯಭಾಮೆ ॥ ೭ ॥ ವಲ್ಲಭೆ ಜನರಿಗಾಗಿ ಒಬ್ಬನೆ ಗೋಕುಲದಲ್ಲಿ । ಗೊಲ್ಲನಂತೆ ಗೋವ ಕಾಯುವ ಕಾರಣವೇನೊ ॥ ಬಿಲ್ಲಹಬ್ಬಕ್ಕೆ ಹೋಗಿ ಮಲ್ಲರ ಕಂಸನ ಕೊಂದ । ಬಲ್ಲಿದ ಶ್ರೀಕೃಷ್ಣ ಕಾಣೆ ಯೆಲೆ ಸತ್ಯಭಾಮೆ ॥ ೮ ॥ ನಗೆಗೇಡು ಮಾಡಿಕೊಂಡು ದಿಗ್ವಸನನಾಗಿ ಯಿರುವೆ । ಅಗ್ರಗಣ್ಯವಿದೇನು ಪೇಳೊ ಹೇ ರಂಗಧಾಮಾ ॥ ಮಿಗೆ ಮೂರು ಪುರದ ಸತಿಯರ ವ್ರತವ ಕೆಡಿಸಿ । ಜಗವ ಮೋಹಿಸನೆ ಬೌದ್ಧ ಯೆಲೆ ಸತ್ಯಭಾಮೆ ॥ ೯ ॥ ಕರದಿ ಖಡ್ಗವನ್ನೆ ಪಿಡಿದು ತರಳ ಅಶ್ವವನ್ನೆ ಯೇರಿ । ತಿರುಗುವದಿದೇನು ಪೇಳೊ ಹೇ ರಂಗಧಾಮಾ । ಧರೆಯೊಳಧಿಕವಾದ ಸೋದೆಪುರದಲ್ಲಿ । ಸ್ಥಿರವಾಗಿ ನಿಂತ ಹಯವದನ್ನ ಕಾಣೇ ॥ ೧೦ ॥ ಶ್ರೀಃ ॥

## ೧೧೭. ರಾಗ ಆನಂದಭೈರವಿ, ರೂಪಕತಾಳ.

ಕರೆಯೆ ಒಮ್ಮೆ ಪ್ರಿಯನಿನ್ನೊಮ್ಮೆ ಕಳುಹೆ ಮಧುರೆಗೆ । ಮುರಳಿ ಮುರಳಿ ಗೋಕುಲಕ್ಕೆ ತೆರಳಿಬಂದೆಯಾ ॥ ೧ ॥ ಬರಸಿಕೊ ನಿನ್ನಿಷ್ಟವನ್ನು ಪ್ರಿಯಸಖನೆ ಅವನ ॥ ಪರಮಬಂಧು ಮಾನಿನಿಯರನು ಪೇಳು ಮಧುಕರಾ ॥ ೨ ॥ ಎಂತು ಕೊಂಡೊಯ್ಯುವೆ ನಮ್ಮ ಶ್ರೀಕಾಂತನ ಬಳಿಗೆ ॥ ಕಾಂತೆಯೊಬ್ಬಳು ಅವನ ಚೆಲುವುದರದಮೇಲೆ ॥ ೩ ॥ ಸಂತತ ನೆಲಸಿಹಳು ಅವಳು ನಮಗು ಮಾನ ॥ ದಂತರಂತರೆಂಬರು ಮಾನವಂತರೆಲ್ಲರು ॥ ೪ ॥ ಗೊಲ್ಲತಿಯರ ಮನೆಯ ಬಿಟ್ಟನೆ ಅವನು ನಮ್ಮ ಸೊಲ್ಲಿಗೆ ನೋತು ಮನವನಿಟ್ಟನೇ ॥ ಲಲಿತಗಂಧಕಸ್ತೂರಿ ಇಟ್ಟನೆ ರಂಗರಾಯ ಮಲತ ಮಾವಗೆ ದ್ವೇಷವ ತೊಟ್ಟನೇ ॥ ೫ ॥ ಕಸ್ತೂರಿಯ ಬೊಟ್ಟನಿಟ್ಟನೆ ಅವನು

ನಮ್ಮ ಮಸ್ತಕವಲ್ಲಿ ಮಲ್ಲಿಗೆ ತುರುಬಿದಾ। ವಸ್ತ್ರ ಕೃಷ್ಣಮುಂದೆ ನಡೆಯಲು ಕಾಕಲತೆಡರುಮುತ್ತಿನಂದದಿ ಹೆಜ್ಜೆಗೊಂಡಿತು ॥ ೬ ॥ ಹರಿಯು ಬರವ ಕೇಳಿ ಹರುಷದಿ ನಾರಿಯರೆಲ್ಲ ಮರುಳುಗೊಂಡು ವಿಗಡಕೆಟ್ಟರೇ ॥ ತರಳೆ ಯುವತಿ ವೃದ್ಧ ಸತಿಯರು ಬಂದರಾಗ ಸಿರಿಯರಸನ ಕಾಂಬೊ ತವಕದಿ॥ ॥ ೭ ॥ ಕೆಲರು ಉಣುತ ಉಡುತಲಿದ್ದರು ಕೆಲರು ತೊಡುತ ಕೆಲರು ಕಟ್ಟುತ ಬಿಡುತಲಿದ್ದರೇ ॥ ಕೆಲರು ಅಡಿಗೆಗಳನೆ ಮರೆತರೇ ಕೆಲರು ವ್ರೋಡುತ ಕೈಯ ಕಂಕಣ ಕಾಲಿಗಿಟ್ಟರೇ ॥ ೮ ॥ ಕಾಲ ಕಡಗ ಕಿವಿಯೊಳಿಟ್ಟರೆ ವಾಲೆ ತೆಗೆದು ತೋಳ ಬಳೆಗೆ ಸೇರಿಸಿ ಬಿಟ್ಟರೇ ॥ ನೀಲವರ್ಣನ ಕಾಂಬೊ ತವಕದಿ ನಾರಿಯರೆಲ್ಲ ಮೇಲುಮಾಳಿಗೆ ಯೇರಿ ಕುಣಿದರು ॥ ೯ ॥ ಇಟ್ಟ ಕಂಕಣ ಕಾಲಿಗಿಟ್ಟರೆ ತೊಟ್ಟ ಕುಪ್ಪಸ ಬಿಟ್ಟ ಸೋಲುಮುಡಿಗೆ ಬಿಗಿದರೆ ॥ ಅಟ್ಟ ಬಿಸಿಯ ಪಾಯಸವ ತಂದು ಸಿಟ್ಟ ಲಕ್ಕ ಪುಟ್ಟಮಕ್ಕಳ ಬೆಟ್ಟ ಸುಟ್ಟಳೇ ॥ ೧೦ ॥ ಒಂದುಕಣ್ಣಿಗೆ ಕಪ್ಪನಚ್ಚುತ್ತ ಇಂದುಮುಖಿ ಮತ್ತೊಂದುಕಣ್ಣಿಗೆ ಹಚ್ಚಮರತಳೇ ॥ ನಂದನರಗೆ ಮೊಲೆಯನೀಡುತ ಬಿಸುಟು ಗೋವಿಂದನೆಂದು ಸತಿಯರಿದ್ದರೂ॥ ॥ ೧೧ ॥ ಒಂದು ಕೈಲಿ ಪಾತ್ರವ ಪಿಡಿದು ನಿಂದು ರಭಸದಿ ಮತ್ತೊಂದು ಕೈಲಿ ಮಕ್ಕಳನೆಳವುತ ॥ ಬಂದರೆಲ್ಲ ಕೃಷ್ಣನ್ವಿರಹದಿ ನಿಂದಿರಿ ಯೆಂದರೆ ಮಂದ ಮರುತನಾಗ ಬೀಸಲು ॥ ೧೨ ॥ ರಂಗ ಚೆಲುವ ರಾಮ ಚೆಲುವ ಯಾಗೆಲ್ಲರೆನುತ ಅಂಗನೇಯರು ಜಗಳವಾಡುತ। ಪೊಂಗೊಳಲ ಪಿಡಿದುಕೊಂಡಿಹ ಆವನು ನಮ್ಮ ಸಂಗಡಿಗ ರಂಗನಲ್ಲವೇ ॥ ೧೩ ॥ ರಾಮನಾವ ಚೆಲುವ ಹೇಗೆಲೆ ಶ್ಯಾಮವರ್ಣನು ಕೋಮಲಾಂಗಜ ತೆರದಿ ಪೋಲ್ವನೂ॥ ಭ್ರಾಮಕಾದ ಮಾತನಾಡುವೆ ನೀ ಪೋಗು ಹೆಣ್ಣೆ ಸ್ವಾಮಿ ದಯಾಪರ ಕೃಷ್ಣನೂ ॥ ೧೪ ॥ ದೇವನಗ್ರಜ ಚೆಲುವನಾದರೆ ಆವನು ನಮ್ಮ ಭಾವನೆಂದು ತಿಳಿಯಬೇಕೆಲೇ ॥ ಜೀವರೊಡೆಯನಾಗಬಲ್ಲನೆ ಆವನು ನಮ್ಮ ನೋವ ನುಡಿವ ನಿಷ್ಠುರವಾಕ್ಯದಿ ॥ ೧೫ ॥ ಕಪ್ಪುಕೃಷ್ಣ ಚೆಲುವನಾದರೆ ಆವನು ನನ್ನ ದರ್ಪಣ ಪೂತನಿಯಸುವ ಹೀರಿದ ॥ ಮುಪ್ಪಿಲ್ಲವನ ಪಡೆದಳೆಂಬೊ ಸಂತೋಷದಿಂದ ಕಪ್ಪನಚ್ಚಿ ಮಗುವ ನೋಡಿದಳೆ॥ ೧೬ ॥ ಹೆತ್ತ

ತಾಯು ಸುಖವ ಪೇಳ್ವರೆ ಹಾಗಾದರಿನ್ನು ಮರ್ತ್ಯರೊಳಗೆ ಯೆಣಿಸಲಾ ಗದು ॥ ಸತತ ಮರುಳುಗೊಂಡು ಹರುಷದಿ ಹಿತದಿಯುವನ ಸುಖವ ಸೂರೆಗೊಂಡರೆಲ್ಲರು ॥ ೧೭ ॥ ಕೊಳಲ ಧ್ವನಿಯು ಕೇಳಿ ಬಂದರೆ ಚೆಲುವಿಕೆಗವನ ಬಲೆಗೆ ಲಲನೆಯರು ಸಂದರೆ॥ ನಳಿನನಾಭ ಕಾಯೊ ಯೆಂದರೆ ಬಲೆಯು ಕೌಚಿ ಬಲೆಯೊಳಗೆ ಬಿಸುಟು ಪೋದನು ॥ ೧೮ ॥ ಕ್ಲೇಶವಾಶ ಕ್ಯ್ಮಾಲಿದು ಬಂದರೆ ಅವನು ನಮ್ಮ ಶೀರ್ಷಮಧ್ಯದಿಂದಲೋಲ್ವನು ॥ ವಾಸುದೇವ ಕಾಯೊ ಯೆಂದರೆ ಬಲೆಯು ಕೌಚಿ ಮೋಸದಲ್ಲಿ ಬಿಸುಟು ಪೋದನು ॥ ॥ ೧೯ ॥ ಕೇಳಿದ್ದಿಲ್ಲವೆ ಚೋದ್ಯವೊಂದನು ಡೊಂಕುಕುಬುಜೆ ನೀಲವರ್ಣನ ಸೆರಗ ಪಿಡಿದುದಾ॥ ಲೋಲನೇತ್ರೆಯಾದಳಾಗಲೆ ಡೊಂಕು ಹೋಗಿ ತಾಳಮೇಳಕೆ ಕರೆದಳಾತನಾ ॥ ೨೦ ॥ ಸ್ಮರಪಿತನ ಚೆಲುವಿಕೆಯು ಕಂಡು ಗಂಧಪೂಸಿ ಮರುಳುಮಾಡಿ ಮನೆಗೆ ಕರೆದಳು ॥ ತರಳತನದಿ ಅವಳ ಮೆಟ್ಟಲು ಡೊಂಕು ಹೋಗಿ ಸಿರಿಯರಸಗೆ ಯೋಗ್ಯಳಾದಳು ॥ ॥ ೨೧ ॥ ಕುಂಜರಾಗ ಪಿಡಿದನಚ್ಯುತ ನಡೆವ ಮನೆಗೆ ಅಂಜಿಸುತಿದೆ ಕಾನುವೆಂದಳು ॥ ಕಂಜಸಖನು ಅಸ್ತಮೈಸಿದ ನಾನಂಜುವೆನೆಂದು ಮಂಜುಳವಾದ ದೊರಕಿತೆಂದಳು ॥ ೨೨ ॥ ಗಂಧವಿತ್ತ ಕುಬುಜೆಯಂಗ ಡೊಂಕ ತಿದ್ದಿ ಹೊಂದಿ ರಜಕನ ಅಸುವ ಮುಡುಹಿದಾ ಮಡಿಯನುಟ್ಟು ॥ ಮುಂದೆ ರಾಜಪಥದಿ ವಸ್ತ್ರರಾಶಿಯನ್ನಾಸಿ ಅಗ್ರಜನೊಡನೆ ನಡದನೆ ನಡದನು ॥ ॥ ೨೩ ॥ ಧನುವ ಮುರಿದು ಗಜವ ಕೊಂದನೆ ದೈತ್ಯವನದವನ ಲಿಂಗನಿಂದನೆ ॥ ದನುಜಮಲ್ಲರ ಮುಂಡೆ ನಿಂದಗೆ ಮಾವಕಂಸನ ಮನಕೆ ಭಯವ ಇಂದು ತಂದನೆ ॥ ೨೪ ॥ ಕಾಲ ಪಿಡಿದು ಗಗನಕೆತ್ತಿದ ಚಾಣೂರಮಲ್ಲರ ಲೀಲೆಯಿಂದ ಸುತ್ತತಿರುಗಿಸಿ ॥ ರಾಯ ಮಲ್ಲರ ಕೃಷ್ಣರಾಯ ಧರೆಯೊಳಪ್ಪಳಿಸಿ ಪುಡಿಯ ಮಾಡಿ ಖೂಳಜನರ ಯೆಳೆಗೆ ಕೆಡಹಿದ ॥ ॥ ೨೫ ॥ ಮುದ್ದುರಂಗನೊದ್ದಭರದಲಿ ಕೀಲು ಕಳಚಿ ಬಿದ್ದ ರಥವಿ ಸೇನೆಯ ಮರ್ದಿಸಿದ ಪುಟ್ಟಕೈಲಿ ॥ ಗುದ್ದಿ ಬೀಳೆ ಘಟದಿ ಗಳಗಳ ಅವನ ಹತ್ತಿಲಿದ್ದ ಸೇನೆಯನ್ನನುಟ್ಟು ಮಾಡಿದೇ ॥ ೨೬ ॥ ಆದಕೊ ಬಂದ ಇದಕೊ ಬಂದನೆಂದು ವಿಶ್ವರೂಪಗೆ ಬೆದರಿ ಬಿದ್ದು ಕೆಲವರಳಿದರು ॥ ಹೃದಯದಲ್ಲಿ ಕೃಷ್ಣ

ತೊಲಗಲು ಶ್ವಾಸವಡಗಿ ಕದನದಲ್ಲಿ ಕೆಲವರಳಿದರು ॥ ೨೭ ॥ ಇಲ್ಲಿಹ ಕೃಷ್ಣ ಈತನೆ ಕೃಷ್ಣನೆಂದು ಖಳರೆಲ್ಲ ಬಲ್ಲಚಪಳರಾಯುಧ ಪಿಡಿದರು ॥ ಕೊಲ್ಲು ಕೊಲ್ಲು ಯೆನುತಲಾಗಲೆ ಹಲ್ಲ ಕಿತ್ತು ಕಲ್ಲಕುಣಿಯ ಮಾಡಿದ ಹೋಗೆಲೆ ॥ ೨೮ ॥ ರಥವನಿಟ್ಟು ರಥವ ನಡಿಸಿದ ಅತಿಸಮರ್ಥ ಗಜವನಿಟ್ಟು ಗಜವ ಕೆಡಹಿದಾ ॥ ರಥಚಕ್ರಗಳನೆ ತೆಗೆದು ತೆಗೆದಿಟ್ಟ ಚಕ್ರಧರನು ಕ್ಷಿತಿಗೆಕ್ಷೋಣಿಬಲಕೆ ಕ್ಷಯವಿತ್ತಾ ॥ ೨೯ ॥ ತರುವ ಕಿತ್ತು ಆದರಘಾಯದಿ ಮುಕುಂದ ಲಲನೆ ಕಂತುರಗನರಸಮೂಹದಿ ॥ ಹರಿಯ ಭರಕೆ ಅಂಜಿ ಪೋಡುವಾಗ ಜಪ್ಪುಟಿಗಳ ಭರಕೆ ಸೈನ್ಯ ಚೂರ್ಣವಾದುದು ॥ ॥ ೩೦ ॥ ಮಾವ ನೀನು ನಮ್ಮ ಕರೆಸಿದೆ ಬಿಲ್ಲಹಬ್ಬಕೆ ಸಾಯಲಿಕ್ಕೆ ಮಲ್ಲರ ಕಳುಹಿದೆ ॥ ಜೀವಸಹಿತ ನಿನ್ನ ಬಿಡುವೆನೆ ಉಪಾಯದಿಂದ ಮಾರಜನರ ಕೊಲಿಸಿ ನೋಡಿದೆ ॥ ೩೧ ॥ ಲಂಘಿಸಿ ಮಂಚದೊಳಿದ್ದ ಕಂಸನ ತಲೆಯ ಗುದ್ದಿ ರಂಗನು ನೆಲದ ಮೇಲೆ ಕೆಡಹಿದಾ ॥ ರಂಗರಾಯ ಖಳರ ಮರ್ದಿಸಿ ಅವನ ಹೆಂಡರ ಮಂಗಳಸೂತ್ರದ ಗಂಟ ಬಿಡಿಸಿದಾ ॥ ೩೨ ॥ ಗೋಕುಲದಲ್ಲಿ ಶಕಟ ಪೂತನೆ ಅದೇನು ಚೋದ್ಯ ಅನೇಕಖಳರ ಕೊಂದ ಕೃಷ್ಣಗೆ ॥ ಲೋಕದೊಳಗೆ ಅನ್ಯರಾಶ್ರಯ ಅಯುಧಂಗಳು ಬೇಕೆ ಬಾಹುಬಲಧೀರಗೆ ॥ ೨೩ ॥ ಇಂದ್ರ ತನ್ನ ಭಕ್ತಿಭಾವದಿ ಕಳುಹಿದ ಸ್ಯಂದನವನು ಕೃಷ್ಣನೇರಿದಾ ॥ ಇಂದು ಬಲು ಬುಧರು ಸ್ತುತಿಸಲು ಸಮರದೊಳಗೆ ಕೊಂದನೆಂದು ಕಂಸನವರ್ಗಳಾ ॥ ೩೪ ॥ ಕಷ್ಟಬಿಡಿಸಿ ತಾಯಿತಂದೆಯ ಋಣವ ತಿದ್ದಿ ಪಟ್ಟವನುಗ್ರಸೇನಗೆ ಕಟ್ಟಿಸಿದಾ ॥ ಸೃಷ್ಟಿಯೊಳಗೆ ಹಯವದನನ ಸ್ತುತಿಸಿ ಅಟ್ಟುವೆ ನಮ್ಮ ಭವದ ಬೇಸರಾ ॥ ೩೫ ॥ ಅಟ್ಟಿದುದಕ್ಕೆ ತನ್ನ ಭೃತ್ಯರ ವಿಟ್ಠಲ ನಮ್ಮ ಬಿಟ್ಟವನಲ್ಲ ಕೇಳು ಕೇಳಿದು ॥ ದಿಟ್ಟ ಹಯವದನ ವಿಠಲನ ಮಹಿಮೆಯ ॥ ಕಂಡು ಜಗಜಟ್ಟಿಯನ್ನಜನ ಕೊಂಡಾಡಿತು ॥ ೩೬ ॥ ಮೊಲೆಯನುಂಡು ಪೂತನೆಯ ಮಡುಹಿ ಹರುಷತಾಳುತಾ ॥ ಮಲಗಿ ಶಕಟನ ತುಳಿದು ಅತನ ಕೊಂದ ಹಯವದನ್ನ ಬಲ್ಲಿದ ॥ ೩೭ ॥

ಶ್ರೀ ॥

೧೧೮. ರಾಗ ಕಾಂಬೋಧಿ, ಅಟತಾಳ.

ಆಗಲಿ ನಾ ಸೈರಿಸಲಾರೆ। ಸ। ನ್ನಗರಾಜಶಯನನ ತೋರೆ॥ ಪಲ್ಲ॥ ಖಗರಾಜಗಮನನ ನಿಗಮಗೋಚರನ ॥ ಜಗದೇಕ ವಂದ್ಯನ ಜಾಣೆ ರಂಗಯ್ಯನ ॥ ಅನುಪಲ್ಲ ॥ ಮಾರನು ಮನೆಗ್ಹೋದನಮ್ಮಾ। ಎನ್ನ। ಸೇರದೆ ಮುನಿದಕಾಣಮ್ಮಾ॥ ಯಾರಿಗೆ ವುಸುರಲೆ ನೀರಜಾಕ್ಷಿಯೆ।ಎನ್ನ। ಬಾರದೆ ಮುನಿದು ತಾಳಲಾರೆ ನೋಡಮ್ಮ॥ ೧ ॥ ಹೆಣ್ಣಾಜನ್ಮ ವ್ಯರ್ಥ ಕಾಣಮ್ಮಾ। ಎನ್ನ। ಪುಣ್ಯವಿನ್ನಿಂತಾಯಿತಮ್ಮಾ॥ ಬಣ್ಣಿಸಲವನೀವೆ ಭಾಮಿನಿ ರನ್ನಳೆ। ಕಣ್ಣಾಣೆ ಕರತಾರೆ ಪುಸಿಯಲ್ಲ ಕೃಷ್ಣನ ॥ ೨ ॥ ಅಂತರಂಗವ ತಿಳಿದೇನಮ್ಮಾ। ಪ್ರಾಣ। ಕಾಂತ ಮನೆಗೆ ಬಂದನಮ್ಮಾ॥ ಪಂಥವ ಬಿಟ್ಟೀಗ ಬಂದೆ ನಾ ಪಾಲಿಸುವ। ಕಂತುಜನಕ ಹಯವದನ ರಂಗಯ್ಯನಾ ॥ ೩ ॥ ಶ್ರೀಃ ॥

೧೧೯. ರಾಗ ಆಹೇರಿ, ಝಂಪೆತಾಳ.

ಮರುದಂಶಮಧ್ವಮುನಿರನ್ನಾ। ನಿನಗೆಣೆಗಾಣೆ ಜಗದೊಳಗೆ ಸರ್ವರೊಳು ಪೂರ್ಣಾ ॥ ಪಲ್ಲ ॥ ಹಿಂದೆ ರಾಮರ ಮುಂದೆ ಭಟನಾಗಿ ನಿಂದೆ। ಸಂದೇಹ ಬಹುಗಿರಿಯ ತಂದೆ। ಅಸುರರ ಕೊಂದೆ। ಇಂದ್ರಾದಿಸುರರ ನೀ ತಂದೆ। ನೀನೀಗ। ಬಂದು ಧರೆಯೊಳಗೆ ಗುರುವೆನಿಸಿಕೊಂಡೇ॥ ೧ ॥ ಕೌರವನ ಬಲವನು। ತರಿದೆ ಕೀಚಕನ ಮುರಿದೆ। ಉರ್ವಿಯೊಳು ಬೇಸರದೆ ಷಡ್ರಿಪುಕರನು ಗೆಲಿದೆ॥ ಹರಿಯ ಕಿಂಕರನಾಗಿ ಮೆರೆದೆ। ನೀನೀಗ। ಸರ್ವವನು ತೊರೆದು ಶಾಸ್ತ್ರಾಮೃತವ ಕರೆದೇ ॥ ೨ ॥ ದುರುಳ ವಾದಿಗಳಳಿಪ ಘನಶ್ಯಾಮಸಖನೆನಿಪ। ಸಿರಿಯರಸ ಹಯವದನಪದಕಂಜಕಿದು ಮಧುಪ ॥ ಗುರು ಮಧ್ವಪ ನಿರ್ಲೇಪ ಶುದ್ಧ ಸ್ವರೂಪ। ಪರಮಪಾವನ ಭಾಪು ಬಹಳಪ್ರತಾಪ ॥ ೩ ॥ ಶ್ರೀಃ ॥

೧೨೦. ರಾಗ ನವರೋಜು, ತ್ರಿಪುಟತಾಳ.

ಯದುಪತಿಯ ತೋರಮ್ಮಾ। ಯೆನ್ನ ಕೈಬಿಡದಿರಮ್ಮಾ॥ ಎದೆಯೊಳು ನಿನ್ನ ನೆಲಸಿಕೊಂಡನಾ। ಖಳಕುಲಖಂಡನಾ ನಿನ್ನಯ ಗಂಡನಾ॥

॥ ಪಲ್ಲ ॥ ಸರಸಿಜದಳನೇತ್ರೆ । ಸದಮಲಶುಭಗಾತ್ರೆ ॥ ಸರಸದಿ ನಿನ್ನ ಕೂಡೆ ಮಾತನಾಡುವಾ । ಕರುಣದಿ ನೋಡುವಾ ಭಕ್ತರೊಡನಾಡುವಾ ॥ ॥ ೧ ॥ ಮದಗಜಸಮಯಾತ್ರೆ । ಮೇದಿನಿಯೊಳತಿಚಿತ್ರೆ ॥ ಅದುಭುತ ಪ್ರಳಯನೊಳು ಮಲಗಿಪ್ಪನಾ । ನಿನಗೊಲಿದಿಪ್ಪನಾ ಮನ್ಮಥನಪ್ಪನಾ ॥ ॥ ೨ ॥ ಆದ್ಯಂತಮಧ್ಯರಹಿತೆ । ಅಜಭವಸುರವಾತೆ ॥ ಮುದ್ದುಹಯ ವದನ ಶ್ರೀಧರದೇವನಾ । ಸೋದೆಪುರವಾಸನಾ ವಾದಿರಾಜಯತಿದೇಶನಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೧. ರಾಗ ಸೌರಾಷ್ಟ್ರ, ಛಾಪುತಾಳ.

ಹೇಳಲೊ ರಂಗಯ್ಯ ಹೇಳಲೊ ಕೃಷ್ಣಯ್ಯ ಈಗ । ಯೆಲ್ಲರ ಮುಂದೆ ಹೇಳಲೋ ॥ ಪಲ್ಲ ॥ ವಾಸುದೇವ ನಿಮ್ಮ ವರ್ಮಕರ್ಮಂಗಳ ದೇಶದೇಶದ ಮೇಲೆ ಹೇಳಲೋ ॥ ಅನುಪಲ್ಲ ॥ ಮತ್ಸ್ಯಾವತಾರನಾಗಿ ಮಡುವನೆ ಹೊಕ್ಕದ್ದು ಮತ್ತೆ ಯೆಲ್ಲರ ಮುಂದೆ ಹೇಳಲೋ । ಮಂದರ ಗಿರಿಯನ್ನು ಬೆನ್ನಲಿ ನೆಗಹಿದ್ದು ಸುಂದರರೂಪದಿಂದ್ಹೇಳಲೋ ॥ ಹೊಟ್ಟೆಗಿಲ್ಲದೆ ಹೋಗಿ ಹಸಿಮಣ್ಣ ಮೆದ್ದದ್ದು ಅಷ್ಟು ಯೆಲ್ಲರ ಮುಂದೆ ಹೇಳಲೋ । ಹೇಸಿಗಿಲ್ಲದೆ ಹೋಗಿ ಕರುಳ ಮಾಲೆಯ ಕೊರಳಿಗೆ ಹಾಕಿದ್ದು ಹೇಳಲೋ ॥ ೧ ॥ ಬಡವಬ್ರಾಹ್ಮಣನಾಗಿ ಬ್ರಹ್ಮಚಾರಿಯಾಗಿ ಬಲಿಯು ದಾನವ ಬೇಡಿದ್ಹೇಳಲೋ । ಛಲದಿಂದ ಕ್ಷತ್ರಿಯರ ಕುಲವ ಸಂಹರಿಸಿ ನೀ ತಾಯಿಯ ಕೊಂದದ್ದು ಹೇಳಲೋ ॥ ನಳಿನಾಕ್ಷಿಗೋಸ್ಕರ ಅರಣ್ಯ ಚರಿಸಿ ನೀ ರಾವಣನ ಕೊಂದದ್ದು ಹೇಳಲೋ । ಗೋಕುಲದೊಳಗೆಲ್ಲ ಗೋಪಾಲಕನಾಗಿ ಲೂಟಿಯ ಮಾಡಿದ್ದು ಹೇಳಲೋ ॥ ೨ ॥ ಪತಿಯುಳ್ಳ ನಾರಿಯರ ವ್ರತಭಂಗ ಮಾಡಿ ನೀ ಅತಿಲಜ್ಜೆಗೇಡೆಂದು ಹೇಳಲೋ । ಅತಿಮುದ್ದು ತೇಜಿಯನೇರಿ ನೀ ನಡಿಸಿದ್ದು ಕದನಕಂಟಕನೆಂದು ಹೇಳಲೋ ॥ ಗುರುವಾದಿರಾಜಗೆ ವೊಲಿದು ಸೋದೆಗೆ ಬಂದು ಚೆಲುವ ಶ್ರೀಹಯವದನನೆಂದ್ಹೇಳಲೋ ॥ ೩ ॥ ಶ್ರೀಃ ॥

## ೧೨೨. ಶ್ರೀರಾಗ, ಆದಿತಾಳ.

ಮನೆಮನೆಗೆ ಸಾರುತ ಬಂದ । ಪ್ರಸನ್ನಮೂರುತಿ ಹಯವದನ ಗೋವಿಂದ ॥ ಪಲ್ಲ ॥ ತನ್ನ ನಂಬಿದವರ ತಾಪತ್ರಯ ಕೆಡಿಸುವ ॥ ಉನ್ನಂತ ಪದವಿಯನಿತ್ತು ರಕ್ಷಿಸುವ ॥ ೧ ॥ ಇಂದು ದಶಮಿ ಶಾಕಾವ್ರತವ ಮಾಡಿ ನೀವೆಲ್ಲ ॥ ಬರದೆ ಭೋಜನ ಮಾಡಿರೋ ಯೆಂದು ॥ ೨ ॥ ಜಲಪಾನ ಸಲ್ಲ ಲವಣ ಸಲ್ಲ ನಿಮಗೆಲ್ಲ ॥ ಫಲಹಾರ ಸಲ್ಲ ಸಲ್ಲದು ಸಲ್ಲದು ಯೆಂದು ॥ ೩ ॥ ನಾಳೆ ಯೇಕಾದಶಿಯುಪವಾಸ ಜಾಗರ ॥ ಆಲಸ್ಯವ ಮಾಡದೆ ಮಾಡಿರೊ ಯೆಂದು ॥ ೪ ॥ ಅನ್ನವರ್ಜಿತವು ತಾಂಬೂಲ ದರ್ಷಣ ॥ ಚೆನ್ನವಸ್ತ್ರವು ವರ್ಜಿತ ವರ್ಜತವೆಂದು ॥ ೫ ॥ ಕಲಾರ್ಧ ದ್ವಾದಶಿ ಬಂದಾಗಲೆ ನೀವು ॥ ವೊಲವಿನಿಂದಲೆ ಪಾರಣೆ ಮಾಡಿರೊ ಯೆಂದು ॥ ೬ ॥ ಇನಿತು ಸಂತೋಷದಿ ಮಾಡಿದ ಸುಜನರ ॥ ತನ್ನಂತೆ ಮಾಡುವ ಸಿರಿಹಯವದನ ॥ ೭ ॥ ಶ್ರೀಃ ॥

## ೧೨೩. ರಾಗ ಮೋಹನ, ಝಂಪೆತಾಳ.

ಈತನೆ ಕಾಣಿರೋ । ಮಧ್ವಮುನಿ । ಈತನೆ ಕಾಣಿರೋ ॥ ಪಲ್ಲ ॥ ಪರಿಪರಿಶ್ರುತಿಗಳೆಂಬ ಗುಹೆಗಳಲಿ ಕೇ । ಸರಿಯಂತೆ ಚರಿಸುತ ಹರಿಯೆ ಸರ್ವೋತ್ತಮನೆಂಬ ಘೋಷಗಳಿಂದ । ದುರುಳವಾದಿಗಳೆಂಬೊ ನರಿಗಳೋಡಿಸಿದಾತ ॥ ೧ ॥ ಸಕಲಾಗಮಗಳೆಂಬ ಶರಧಿಯ ದಾಟಲು । ಯುಕುತಿಂದ ಮಥಿಸಿ ॥ ಅಕಳಂಕ ಶ್ರೀಹರಿಯೆಂಬ ರತ್ನವ ಕಂಡು । ಮುಕುಟದಲಿಟ್ಟು । ಲೋಕದಿ ಮೆರೆಸಿದಾತ ॥ ೨ ॥ ವೇದಸಾರವೆಂಬ ಈಶತ್ವವಾದ । ಅಮೃತವ ಕಲ್ಪಿಸಿ ॥ ಆದಿಮೂರುತಿ ಶ್ರೀಹಯವದನನ । ದಿವ್ಯ । ಪಾದಸೇವಕನಾದ । ಮಧ್ವಮುನಿಯೆಂಬಾತ ॥ ೩ ॥ ಶ್ರೀಃ ॥

## ೧೨೪. ರಾಗ ಗೌಳಿಪಂತು, ಅಟತಾಳ.

ಜಯರಾಯ ॥ ಪಲ್ಲ ॥ ಜಯರಾಯ ನಿನ್ನ ದಯವುಳ್ಳ ಜನರಿಗೆ ॥ ಜಯವಿತ್ತು ಜಗದೊಳು ಭಯಪರಿಹರಿಸುವ ॥ ಅನಪಲ್ಲ ॥

ಖುಲ್ಲರಾದ ಮಾಯ್ಗಳ ಹಲ್ಲುಮುರಿದು ॥ ವಲ್ಲಭ ಜಗಕೆ ಶ್ರೀನಲ್ಲನೆಂದರುಹಿದ ॥ ೧ ॥ ಮಧ್ವರಾಯರ ಮತ ಶುದ್ಧಶರಧಿಯೊಳು ॥ ಉದ್ಭವಿಸಿದ ಗುರು ಸಿದ್ಧಾಂತಸ್ಥಾಪಕ ॥ ೨ ॥ ಸಿರಿಹಯವದನನ ಚರಣಕಮಲವನು ॥ ಭರದಿ ಭಜಿಸುವರ ದುರಿತಗಳ ಹರಿಸುವ ॥ ೩ ॥ ಶ್ರೀ ॥

## ೧೨೫. ರಾಗ ವರಾಳಿ, ತ್ರಿಪುಟತಾಳ.

ಬಾರೊ ನಮ್ಮ ಮನೆಗೆ ಶ್ರೀಪ್ರಾಣನಾಥ ॥ ಪಲ್ಲ ॥ ಬಾರೊ ಅಪಾರ ಬಲ ಭಾರತಿಗುಣಜಾಲ । ಭಾರತನುತಶೀಲ ಭಾರತೀಕೇಳಿಲೋಲ ॥ ॥ ಅನುಪಲ್ಲ ॥ ಅಕ್ಷನೆಂಬ ದುಷ್ಟ । ರಾಕ್ಷಸಕುವರನ್ನ ॥ ಪ್ರೇಕ್ಷಿಸಿ ಮೇಲೆ ಸುತ್ತಿ । ಪ್ರಕ್ಷೇಪಮಾಡಿದನೆ ॥ ೧ ॥ ನಿಂದಕನಾದ ಜರಾ । ಸಂಧನ ಸೀಳಿದ ಶ್ರೀ ॥ ನಂದಗೋಪನ ಮುದ್ದು । ನಂದನಪ್ರಿಯಕಂದ ॥ ೨ ॥ ವೇದವ್ಯಾಸರ ನೋಡಿ । ಭೇದಶಾಸ್ತ್ರವ ಮಾಡಿ ॥ ಮೇದಿನಿಯೊಳು ತತ್ವ । ಬೋಧನೆ ಬೀರಿದಾನೆ ॥ ೩ ॥ ವಾದಿರಾಜರ ಮುಂದೆ । ವಾದಿಸಿ ಮೆರೆಯುವ ॥ ವೇದವೇದ್ಯರಯುತ । ವಾದಿರಾಜರಕೂಡಿ ॥ ೪ ॥ ಬಂಧುಜನಕೆ ದುಃಖ । ಬಂಧನ ಬಿಡಿಸೆಂದು ॥ ಬಂದು ಬೇಡಿದ ಗುರು । ವೃಂದಾವನಾರ್ಯವಂದ್ಯ ॥ ೫ ॥ ಅಷ್ಟಜನರು ಮಾಳ್ಪ । ಇಷ್ಟಪೂಜೆಗೆ ಮೆಚ್ಚಿ ॥ ಸ್ವಚ್ಛದಿ ಪರಮೇಷ್ಠಿ । ಪಟ್ಟವನಾಳುವನೆ ॥ ೬ ॥ ಕುಂಜರವರದ ಶ್ರೀ । ವಿಜಯಹಯವದನ ॥ ಮಂಜುಳಪಾದಪದ್ಮ । ಪೂಜಿಪರೊಳು ವರ ॥ ೭ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೬. ರಾಗ ಸಾವೇರಿ, ರೂಪಕತಾಳ.

ವಿಷಯಾಶೆ ಬಿಡಲೊಲ್ಲದೊ ದೇವ ॥ ಪಲ್ಲ ॥ ವಸುದೇವಸುತ ನಿನ್ನ ವಶವಾಗದರಿಂದ ॥ ಅನುಪಲ್ಲ ॥ ಉದಯದಲೆದ್ದು ಹರಿಪಾದಗಳನು ಸ್ಮರಿಸದಲೆ ಕುದಿದು ಪರರನ್ನ ಬೈದು ಸುಯ್ದು । ಮುದದಿಂದ ಮಜ್ಜನವ ಮಾಡದಲೆ ಕಂಡಕಡೆ ಯೆರಗಿ ಪರಸದನಕಾಗಿ ಪೋಗಿ ॥ ಮದಗರ್ವದಿಂದ ಗುರುಹಿರಿಯರನ ವಂದಿಸದೆ ಕದನವನೆ ತೆಗೆದುಬಂದು ನಿಂದು ।

ಇದು ಸಾಧನವೆಂದು ಉದರನೆವದಲಿ ತಿರುಗಿ ಸುದತಿಯರ ಸುಖಬಯಸಿ ಮನಸುವೆಗ್ಗಳವಾಗಿ ॥ ೧ ॥ ಓದುವೆನು ವಿದ್ಯೆಗಳ ಓದನದ ಬಯಕೆಯಲಿ ಸಾಧುಶಾಸ್ತ್ರಗಳ ತೊರೆದು ಮರೆದು । ಕಾದುವೆನು ತರ್ಕವ್ಯಾಕರಣಬಲದಿಂದ ಬೀದಿಬೀದಿಯಲಿ ಅರಸಿ ಬೆರಸಿ ॥ ಮಾಧವನ ಪೂಜಿಸದೆ ಪರರ ಅನ್ನವನುಂಡು ಶೋಧಿಸದೆ ಪುಣ್ಯಾಪಾಪಲೇಪಾ । ಕ್ರೋಧದಿಂದಲಿ ಇನಿತು ಪರಿಪರಿಯ ಭವಣೆಗಳು ಬಾಧೆಗೊಳಗಾಗಿ ಸುಧರ್ಮವನು ಪಡೆದೇ ॥ ॥ ೨ ॥ ಪರರ ಸೌಭಾಗ್ಯ ವಿದ್ಯೆ ಮಕ್ಕಳ ಕಂಡು ಕಂಡು ಮರುಗಿ ಮನದೊಳಗೆ ಕರಗಿ । ಸೊರಗಿ ಧರಧರದಿ ಪರರ ಅಂಗನೆ ಚಲ್ವಿಕೆಯ ಕಂಡು ತೆರೆದು ಕಣ್ಣಿಂದ ನೋಡಿ ಬಾಡಿ ॥ ಎರಗಿ ಮನೆಯೊಳಗೆ ಯೇಕಾಂತದಲಿ ಕಂಡಕಡೆ ಕರೆದು ಸನ್ನೆಯನು ಮಾಡಿ ಕೂಡಿ । ಹೊರಗೆ ಗುಣವಂತನೆಂದೆನಿಸಿ ಧರೆಯೊಳಗೆ ಪಾಮರಬುದ್ಧಿಯಿಂದ ಸಂಚರಿಸಿ ನಿನ್ನನು ಮರೆದೇ ॥ ೩ ॥ ದೇಶದೇಶಕೆ ಧನದಾಶೆಗಾಗಿ ನಡೆದು ಬೇಸರದೆ ಮನೆಗೆ ಪೋಗಿ ಕೂಗಿ । ಭೂಸುರೋತ್ತಮರು ನಾವೆಂದು ಪರರ ಮುಂದೆ ಹೇಸದಲೆ ಹೇಳಿಕೊಂಡು ಭಂಡು ॥ ಕೋಪಗೊಳಿಸಿ ಪರರ ಆಶ್ರಯಗಳನೆ ಮಾಡಿ ಭೇಷಜವು ತೋರಿಕೊಳುತ ಪೊಳುತಾ । ಈಸುಪರಿಯಲಿ ಹಣವ ತಂದು ಕೂಡನೆಹಾಕಿ ಆ ಸತಿಸುತರೆನಗೆ ಗತಿಯೆಂದು ಗುಣಿಸುತಲೆ ॥ ॥ ೪ ॥ ಕಾಯದಾಸೆಯಿಂದ ನೋಯುವ ಬಯಸದಲೆ ಉಪಾಯವನು ಚಿಂತಿಸುತ್ತ ಚಿತ್ತಾ । ಹೇಯವಿಲ್ಲದೆ ಸ್ನಾನಸಂಧ್ಯಾವಂದನ ತೊರೆದು ತೋಯಿಸದೆ ದೇಹವನ್ನು ಇನ್ನು ॥ ಮಾಯವೋಸದಲೆನ್ನ ಬಾಯಿಗೆ ಬೇಕಾದದ್ದು ಆಯಾಸಪಟ್ಟು ತಂದು ತಿಂದು । ಸಿರಿಯರಸ ಹಯವದನರಾಯನೆ ನಾ ನಿನ್ನ ಮಾಯವನು ತಿಳಿಯದನ್ಯಾಯದಿಂದಲಿ ಕೆಟ್ಟೆ ॥ ೫ ॥ ಶ್ರೀಃ ॥

### ೧೨೭. ರಾಗ ತೋಡಿ, ಅಟತಾಳ.

ತಂಗಿ ಮೊಸರ ಸುತ್ತ ಚೆಲ್ಲಿದ । ಮುದ್ದು । ರಂಗ ಬೆಣ್ಣೆಯ ಮೆದ್ದು ಬಲ್ಲಿದಾ ॥ ಪಲ್ಲ ॥ ಪುಟ್ಟಿದಾಗಲೆ ಮೂಲರೂಪವ । ತೋರಿ । ಅಟ್ಟಿದ ಸುಜನರ ತಾಪವ ॥ ಕೊಟ್ಟ ನಮಗೆ ಜ್ಞಾನದೀಪವ । ಕೃಷ್ಣ । ತೊಟ್ಟ

ದುರ್ಜನರೊಳು ಕೋಪವ ॥ ೧ ॥ ಯಶೋದೆಯು ಮೊಲೆಹಾಲನುಂ
ಬಾಗ । ನಸು । ಬಿಸಿನೀರ ಯೆರಸಿಕೊಂಬಾಗ ॥ ಶಿಶು ಪೂತನೆಯು
ಕೊಂದಿತೆಂಬಾಗ । ರ । ಕ್ಕಸರಿಗೆ ಇವ ಬಲುದಿವ್ಯಾಗ ॥ ೨ ॥ ಇಂದಿರೆ
ಯನು ಬಿಗಿದಪ್ಪಿದ । ಸಖಿ । ವೃಂದಾರಕರೊಳಗೊಪ್ಪಿದ । ಕಂದಲ್ಲ
ಕಲ್ಲಿಂದ ಜಪ್ಪಿದ । ತಾಯಿ । ಹಿಂದಟ್ಟಿ ಬರಲೋಡಿ ತಪ್ಪಿದ ॥ ೩ ॥ ಪುಟ್ಟ
ಕೃಷ್ಣನ ಕಟ್ಟಬೇಕೆಂದು । ತಂ । ದೊಟ್ಟಿದ ಹಗ್ಗಗಳ ತಂದು ॥ ಬಿಟ್ಟನಷ್ಟು
ಸಾಲದೆ ದುರ್ಜನರ ಕೊಂದು । ಬಹು । ಘಟ್ಟಿಮಾಡಿ ದಳವ ಹರಿಯೆಂ
ದು ॥ ೪ ॥ ಒರಳನೆಳದ ನೋಡು ಮತ್ತಿಯಾ । ಬಲು । ಮರನ ಕಿತ್ತವನಿವ
ನರ್ಥಿಯಾ ॥ ತರಳಾಕ್ಷಿ ಕೃಷ್ಣನ್ನ ನೆತ್ತಿಯಾ । ಬೆಣ್ಣೆ । ಸುರಿಯುವಾಡಿದಳ
ವನ ಕೀರ್ತಿಯಾ ॥ ೫ ॥ ಗಗನಕ್ಕೆ ಯೇರಿ ವಾತನ್ನ ಕೊಂದ । ನೀರೊ ।
ಳಗೆ ಪೋದ ತಂದೆಯ ಕರತಂದಾ । ಖಗನಂತೆ ಕಡಹದ ಮರದಿಂದ ।
ಹಾರಿ । ವಿಗಡಸರ್ಪನ ತಲೆಯಲಿ ನಿಂದಾ ॥ ೬ ॥ ತುಳದಹಿತಲೆ
ಯನ್ನು ಬಿಟ್ಟದಾ । ನಾಗ । ಲಲನೆಯರುಕ್ತಿಗೆ ಮೆಚ್ಚಿದಾ ॥ ಅಲರು
ಮಳೆಯ ಸುರಿಯೆ ಹೆಚ್ಚಿದಾ । ಕೃಷ್ಣ । ಖಳರಲಕೆಗಳ ಕೊಚ್ಚಿದಾ ॥ ೭ ॥
ನಂದನಮಡದಿಗೆ ಮೆಚ್ಚಿದಾ । ತಾಯ । ಚಂದದ ಕೈಗಳಿಂದು
ಚ್ಚಿದಾ ॥ ಇಂದೆಮ್ಮ ಮನೆಯಲಿ ಸಚ್ಚಿದಾ । ನಂದ । ನಂದ ಹಿಡಿಯೆ
ಕೈಯ ಕಚ್ಚಿದಾ ॥ ೮ ॥ ಮನೆಮನೆಯಲಿ ಪಾಲ ಕುಡಿವನೂ । ತನ ।
ಗನುಕೂಲಬಾಲರ್ಗೆ ಕೊಡುವನೂ ॥ ಮನಕೆ ಬಾರದವರ ಬಿಡುವನೂ ।
ಕರು । ವಿನ ಕೊರಳ ಕಣ್ಣಿಯ ಬಿಡುವನೂ ॥ ೯ ॥ ಕಣ್ಣೊಳು ಪಾಲ
ನುಗುಳಿ ಪೋದ । ಈ । ಚಿಣ್ಣಗೆ ನೋಡಿದು ವಿನೋದ ॥ ಮಣ್ಣ ಮೆದ್ದ
ಖಿಳವ ತೋರಿದ । ಕೃಷ್ಣ । ಸಣ್ಣ ಬಾಯನು ಮುಚ್ಚಿ ಮಗುವಾದ ॥
॥ ೧೦ ॥ ತುತ್ತೊಂದು ಹೆಚ್ಚಲುಗುಳಿಹೋಹ । ಜೀವ । ಮೊತ್ತಾವಾಗಾ
ಲುಂಬದಿದೆ ಮೋಹ ॥ ಪೃಥ್ವಿಯನುದರದಿ ಪೊತ್ತಿಹ । ಈ । ತೆತ್ತಿಗನಲಿ
ಹೆಚ್ಚುತಿದೆ ಸ್ನೇಹ ॥ ೧೧ ॥ ವೃಷ್ಟಿಯ ನಿಲಿಸಲು ಘನಗಾತ್ರ । ವಾಜ ।
ಬೆಟ್ಟನೆತ್ತಿದ ಸರಸಿಜನೇತ್ರ ॥ ದಿಟ್ಟನ್ನ ಚಾರಿತ್ರವತಿಚಿತ್ರ । ಈ । ಸೃಷ್ಟಿ
ಯೊಳಗೆ ಭಕ್ತರಿಗೆ ಮಾತ್ರ ॥ ೧೨ ॥ ಕುಸುಮವಿತ್ತ ಕೋಮಲೆಗಿತ್ತ । ಈ ।

ಹಸು ಕೂಸೆತ್ತ ಪದುವಕವೆತ್ತ ॥ ಹಶುತೃಷೆಯನು ಬಿಟ್ಟು ಗಿರಿಹೊತ್ತ ।
ಈ । ಶಶಿಮುಖಿಜನಕಿವ ಸುಖವಿತ್ತ ॥ ೧೩ ॥ ಮೂಲೋಕವನಾಳ್ದ
ಶಚಿಯ ಗಂಡ । ನಮ್ಮ । ನೀಲವರ್ಣತೊಂಡರ ತೊಂಡ ॥ ಬಾಲಕ
ಸರ್ವೇಶ್ವರಗಂಡ । ಇವನ । ಕೇಳೆಂಬವನು ಜಗದೊಳು ಭಂಡ ॥ ೧೪ ॥
ಅರಳೆಲೆಮಾಗಾಯಿ ಮುಂಗೈಯ್ಯಾ । ಪೂಸ । ಸರ್ವಮುಂಟಿ ಹೂಡೆ
ತ್ರಿಭಂಗಿಯಾ ॥ ವರವೇಣುವನು ತನ್ನಂಗೈಯ । ಲಿಟ್ಟಾ । ಧರದಲ್ಲಾಡಿ
ದನಮ್ಮ ರಂಗಯ್ಯಾ ॥ ೧೫ ॥ ಕೊಳಲೂದಿ ಸುರರನ್ನು ಮೊಲಿಸಿದ ।
ನಾಗ । ತಲೆಗಳನೆಲ್ಲವ ಬರಿಸಿದ ॥ ಇಳೆಯೊಳು ಗೀತವ ಕಲಿಸಿದ ।
ಇಂತು । ಒಲಿದು ಎಕಲನಾವುವ ಪಾಲಿಸಿದ ॥ ೧೬ ॥ ತರುಲತೆಗಳು
ಪುಲಕಿತವಾಗೆ । ಈ । ಚರಪ್ರಾಣಿಗಳೆಲ್ಲ ಸ್ಥಿರವಾಗೆ ॥ ಹರಿಯ ವೇಣು
ನಾದ ಹೊಸಬಗೆ । ಅತಿ । ಹರುಷದಿ ನೋಡೆ ಊದಿದಬಗೆ ॥ ೧೭ ॥
ಪಾಲನೊಲೆಯೊಳಿಟ್ಟು ಪೋದೆವು । ಆಗ । ಕಾಲಭೂಷಣ ಕೈಗಾದವು ॥
ಬಾಲರ ಕೆಲರು ಬಿಟ್ಟೋದೆವು । ಗೋ । ಪಾಲಸಂಗಕ್ಕೆ ಮರುಳಾದೆವು ॥
॥ ೧೮ ॥ ಉಂಬವರಿಗೆ ಬಡಿಸಲಾರೆವೊಲ್ಲದೆ । ಪತಿ । ಎಂಬವನಾಜ್ಞೆಯಿ
ಲ್ಲದೆ ॥ ನಂಬಿದೆವು ನಾವು ಹರಿಯಲ್ಲದೆ । ಅನ್ಯ । ರೆಂಬುದು ಭಕ್ತವರ್ಗಕೆ
ಸಲ್ಲದೆ ॥ ೧೯ ॥ ಶಿಶುವ ಬಿಟ್ಟೊಬ್ಬಳು ನಿಜಕನ್ಯ । ತನ । ದೆಸೆಯ ತೋರಿ
ಸಬಂದಳಚ್ಯುತನ್ನ ॥ ಎಸೆವ ಶ್ರೀಪತಿ ತನ್ನ ರಮಣನು । ಎಂದು । ಬಿಸು
ಟಳು ಮೊದಲಾಳ್ದ ಗಂಡನ್ನಾ ॥ ೨೦ ॥ ಧೇನುಮಾತ್ರದಿಂದ ಫಲವೇನು ।
ಕಾಮ । ಧೇನು ಶ್ರೀಕೃಷ್ಣನ್ನ ಕರೆದೆನೂ ॥ ಮಾನಿನಿ ಮೊದಲುಕರದ
ಧೇನು । ಬಿಟ್ಟು । ಜಾಣೆ ಸೇರಿದೆ ಕೃಷ್ಣನ ಪದವನೂ ॥ ೨೧ ॥ ಸಿರಿ
ಯಂಘ್ರಿ ಮೊತ್ತುವ ಹರಿಯನ್ನ । ಆ । ಕರದಲಂಕಾರವೆಂದೊಬ್ಬಳು ತನ್ನ ॥
ಚರಣನೂಪುರತೋಳಿಗೆ ಧನ್ಯ । ವೆಂದು । ತರುಣಿ ಸೇರಿಸಿಕೊಂಡಳಚ್ಯು
ತನ್ನ ॥ ೨೨ ॥ ಒಲೆಯ ಪಾಲಗ್ನಿಗೆ ಕೊಟ್ಟಳು । ಕೃಷ್ಣ । ಗೊಲಿದಧರ
ಮನವಿಟ್ಟಳು ॥ ಲಲನೆ ಕಣ್ಣಂಜನವ ಬಿಟ್ಟಳು । ಜ್ಞಾನ । ಚೆಲುವ
ನ್ನಂಜನಕೊಡಂಬಟ್ಟಳು ॥ ೨೩ ॥ ಪಶುಪಕ್ಷಿಗಳು ಥರಥರದಲ್ಲಿ । ಈ ।
ಎಸೆವ ಗೀತೆಗಳ ಕೇಳಿ ವನದಲ್ಲಿ ॥ ಹಸುಳೆಯ ನೆನೆಯುತ್ತ ಮನದಲ್ಲಿ ।

ಪರ । ವಶವಾದವು ಆಕ್ಷಣದಲ್ಲಿ ॥ ೨೪ ॥ ಕಂದರ್ಪನ ಗೆಲುವ ಲಾವಣ್ಯ । ನಯು । ದಿಂದ ಮೆರೆವ ನಮ್ಮ ರಂಗನ ॥ ಚಂದನೋಡಲು ಬಂದ ನಮ್ಮಮ್ಮನ । ಈ । ದ್ವಂದ್ವವ ನೋಡೆಲೆ ಕವಿಜನ ॥ ೨೫ ॥ ಇಂತು ತೊರದು ವಿಷಯಂಗಳ । ಅ । ನಂತರ ಕಂಡೆವ್ಮ ಕಂಗಳಾ ॥ ಚಿಂತೆಯು ಕಳೆದೆವು ಮಂಗಳಾ । ಶ್ರೀ । ಕಾಂತನೆ ಕಾವ ಜಗಂಗಳಾ ॥ ೨೬ ॥ ಸೋಳಸಾಸಿರ ಗೋಪಿಯರನಾಂತು । ಗೋ । ಪಾಲ ರಾಸಕ್ರೀಡೆಯಲಿ ನಿಂತು ॥ ತಾಳ ಮೇಳ ರಾಗಂಗಳ ಪಂತು । ಒಪ್ಪಿ । ಲಾಲಿಸೆಮಗೆ ಸರ್ವೇಶ್ವರ ಸಂತು ॥ ೨೭ ॥ ವನದಲಿ ಬಿಟ್ಟೆವ್ಮ ಪೋಡಿದಾ । ನಮ್ಮ । ಮನದಲಿ ಸ್ನೇಹವ ನೋಡಿದಾ ॥ ಪುನರಪಿ ಕರುಣವ ಮಾಡಿದಾ । ಈಗ । ಮನೆಗೆ ಬಾರದೆವ್ಮ ಕಾಡಿದಾ ॥ ೨೮ ॥ ವೃಂದಾವನದೊಳು ನಲಿವರನೂ । ಗೋ । ವಿಂದ ನಮ್ಮ ಮೇಲೆ ಪೊಲಿದನೂ ॥ ಕಂದರ್ಪ ಕೇಳಿಯ ಬಲ್ಲಿದನೂ । ಕಾ । ಳಿಂದಿಯ ಜಲಕ್ರೀಡೆಗಿಳಿದನೂ ॥ ೨೯ ॥ ಚೆಲ್ಲಿವ ಕೈಯಿಂದ ಮೊಳನೀರಾ । ನ । ಮ್ಮೆಲ್ಲರ ನೀರಿಗಂಜನು ಧೀರಾ ॥ ನಲ್ಲಾ ನಾವೆಂದ ಮಾತನು ಮಾರಾ । ನಿವ । ಸುಲಭನೊಮ್ಮೆ ಮೊಗವ ತೋರಾ ॥ ೩೦ ॥ ಕಾಲಿಂದ ಶಕಟನ ಮೆಟ್ಟಿದಾ । ದೊಡ್ಡ । ಗೂಳಿಯ ಕೊಂಬ ಕಿತ್ತು ಕುಟ್ಟಿದಾ ॥ ಪೀಳಿ ಬಕನ ಅಸುವನಟ್ಟಿದಾ । ಕೃಷ್ಣ । ಬಾಲದುಷ್ಟವಧೆಗೆ ಪುಟ್ಟಿದಾ ॥ ೩೧ ॥ ಕೇಶಿಯೆಂಬ ದೈತ್ಯನ ಕೊಂದಾ । ಖಳ । ನಾಶದಲಿ ಸದಾ ಮುಕುಂದಾ ॥ ಅಸಮಯದಲಿ ಅಕ್ರೂರ ಬಂದಾ । ಅವಂಗೆ । ಲೇಸ ಪಾಲಿಸಿ ಕೃಷ್ಣ ನಡೆತಂದಾ ॥ ೩೨ ॥ ದಾಸಗೆ ಯಮುನೆಯೊಳ್ ಭವಬಂಧ । ಬಲು । ಕ್ಲೇಶವ ಬಿಡಿಸಿದಖಿಳವಂದ್ಯಾ ॥ ವೇಷವ ತೋರಿಸಿ ಕೃಪೆಯಿಂದ । ಈ । ಶ್ರೀಶ ಮಧುರಾಪುರಕಾಗಿ ಬಂದಾ ॥ ೩೩ ॥ ಮಧುರೆಯ ಮಲ್ಲರ ಸೋಲಿಸಿದಾ । ತನ । ಗಿದಿರಾದ ಕಂಸನನೊರಸಿದಾ ॥ ಕದನಕೋಲಾಹಲವೆನಿಸಿದಾ । ನಮ್ಮ । ಮದನ ಶರಕೆ ಗುರಿಯೆನಿಸಿದಾ ॥ ೩೪ ॥ ಎಲ್ಲಾ ದೇವರನಿವ ಮಾರಿದಾ । ಸಖಿ । ಬಲ್ಲವರ್ಗಿಷ್ಟವ ಬೀರಿದಾ ॥ ಕಲ್ಲಕಂಬದಿ ತನ್ನ ತೋರಿದಾ । ಜಗ । ದಲ್ಲ ಣದೈತ್ಯನಸು ಹೀರಿದಾ ॥ ೩೫ ॥ ದಯದಿಂದ ಸಖ ನಮಗಾದವ । ಚೆಲ್ವ ।

ಹಯವದನ್ನ ಕೃಪೆಯಾದವ ॥ ನಯದಿ ಜಲವ ಪ್ರೋಕ್ಷಿ ಪೋದವ । ವೈ । ರಿಯ ಕೊಂದು ವೇದವ ಕ್ಯಾದವ ॥ ೩೬ ॥ ವಾದಿರಾಜನುಕ್ತಿಗೆ ಮೆಚ್ಚಿದ । ಪೂರ್ಣ । ಬೋಧರ ಪೂಜೆಗೆ ಹೆಚ್ಚಿದಾ ॥ ಅವರದಿ ಕೃಷ್ಣನ್ನ ಮೆಚ್ಚಿದಾ । ನಮ್ಮ । ಬಾಧಿಪ ಖಳರನ್ನು ಕೊಚ್ಚಿದಾ ॥ ೩೭ ॥ ಶ್ರೀಃ ॥

## ೧೨೮. ತತ್ವಸುವಾಲಿ.

ಹರಿಗೆ ಶರಣೆಂಬೆ ಸಿರಿಗೆ ಶರಣೆಂಬೆ ಪರಮೇಷ್ಠಿ ಗುರುಗಳಿಗೆ ಶರಣೆಂಬೆ ಸುವಿ ॥ ಪರಮೇಷ್ಠಿ ಗುರುಗಳಿಗೆ ಶರಣೆಂದು ನಾ ಪೇಳುವೆ ಶ್ರೀಮದಾನಂದತೀರ್ಥರಿಗೆ ಸಾಸಿರ ಶರಣೆಂಬೆ ಸುವಿ ॥ ೧ ॥ ಆಹರಿ ಪುರುಷೋತ್ತಮರ ವಾಸುದೇವ ಸಾರಾ ಸಂಕರ್ಷಣ ಅತಿಕ್ರೂರ ಸಂಹಾರ ಕಾರ ಸುವಿ ॥ ಸಂಕರ್ಷಣ ಅತಿಕ್ರೂರ ಸಂಹಾರಾಕಾರ ಪ್ರದ್ಯುಮ್ನ ಅನಿರುದ್ಧಗೆ ಬೊಮ್ಮ ಕುಮಾರನಂತೆ ಸುವಿ ॥ ೨ ॥ ಮತ್ಸ್ಯ ಕೂರ್ಮರೂಪ ಸೂಕರನರಹರಿ ಕೋಪಾ । ವಾಮನ ಭಾರ್ಗವ ರಾಮನೆನಿಪ ಭೂಪ ಕೃಷ್ಣ ಸುವಿ ॥ ವಾಮನ ಭಾರ್ಗವನೆನಿಪ ಭೂಪ ಕೃಷ್ಣ ಹರಿಯೂ ಬುದ್ಧ ಕಲ್ಕಿ ರೂಪ ಪ್ರಸಿದ್ಧಗಳೆ ಸುವಿ ॥ ೩ ॥ ಅವಲ್ಲಿ ಮುಖ್ಯಪ್ರಾಣ ಮತ್ತಾವಲ್ಲಿ ನಾರಾಯಣ । ಇವರಿಬ್ಬರ ಗುಣವನ ಅರಿಯದವನೆ ಸುವಿ ॥ ಇವರಿಬ್ಬರ ಗುಣವ ಅರಿಯದವನೆ ಗವನ ಎಂಬರ್ಧದಲ್ಲಿ ಬ್ರಹ್ಮಸೂತ್ರನಂಬಂತೆ ಸುವಿ ॥ ೪ ॥ ಆತ್ಮನು ಅತಂತ್ರ ಪರಮಾತ್ಮನು ಸ್ವತಂತ್ರ ದುಃಖಾತ್ಮನು ಜೀವಾತ್ಮ ಪರಮಾತ್ಮನೆ ಸುವಿ ॥ ದುಃಖಾತ್ಮನು ಜೀವಾತ್ಮ ಪರಮಾತ್ಮನಲ್ಲ ವಾದಿ ಜ್ಞಾನಾನಂದಕನ ಹರಿಗೆ ಸಮಾನದೆಲ್ಲ ಸುವಿ ॥ ॥ ೫ ॥ ಜಡದಲ್ಲಿ ಜೀವಾತ್ಮ ಜಡಜೀವರಲಿ ಪರಮಾತ್ಮ ಕೆಡದಂತೇಕಾತ್ಮ ಬಿಡದಿಹ ಸುವಿ ॥ ಕೆಡದಂತೇಕಾತ್ಮ ಬಿಡದಿಹ ವಾದಿ ದ್ವಾಸುಪರ್ಣವೆಂಬ ಸ್ತುತಿ ಲೇಸು ಲೇಸು ಸುವಿ ॥ ೬ ॥ ಹರಿಜೀವಕ್ಕು ಭೇದ । ಜೀವಜೀವಕ್ಕು ಭೇದ ಜಡಹರಿಗಳ ಭೇದ ಶರೀರ ಭೇದ ಸುವಿ ॥ ಜಡಹರಿಗಳ ಭೇದ ಶರೀರ ಭೇದ ವಹ್ನಿಜಡಜೀವ ಭೇದ ಪಂಚಭೇದಗಳ ಸುವಿ ॥ ೭ ॥ ಪಂಚಭೇದಗಳೆಂಬೊ ಪ್ರ । ಪಂಚದಲ್ಲಿ ಸಕಲ ವೈಕುಂಠದೊಳಗಿರುಳಾ

ಒಂದುಂಟು ಕೇಳು ಸುವಿ ॥ ವೈಕುಂಠದೊಳಗಿರುಳ ಒಂದುಂಟು ಕೇಳು ವಾದಿ ಸಾಕು ಸಾಕು ನಾಲ್ಕು ವೇದ ಮುಕ್ತಿಯುಂಟು ಸುವಿ ॥ ೮ ॥ ಶ್ರವಣ ಕೀರ್ತನ ಹರಿಸ್ಮರಣೆ ಸೇವನ ಪೂಜನವಂದನ ದಾಸನಹನಂತೆ ಸುವಿ ॥ ಪೂಜನವಂದನ ದಾಸನಹನಂತೆ । ಗಳ ತನ್ನ ಅರ್ಥ ಕೂಡೊಂ ಭತ್ತು ಭಕ್ತಿ ಸತ್ಯ ಉಂಟು ಸುವಿ ॥ ೯ ॥ ಜೀವೇಶನೆಂದು ಹರಿ ನಿರ್ಗುಣ ನೆಂದು ಅಪೂರ್ಣಗುಣನೆಂದು ಬ್ರಹ್ಮಾದಿಗಳೊಂದು ಸುವಿ ॥ ಬ್ರಹ್ಮಾದಿಗ ಳೊಂದು ಸಮರಧಿಕಾರ ಅವತಾರ ಯೆಲ್ಲ ಭೇದ ಯೆಂಬವಗೆ ಸುವಿ ॥ ॥ ೧೦ ॥ ಅವತಾರ ಯೆಲ್ಲವಂಶವತಾರ ಯೆಂಬ ಗುರು ಶಿಷ್ಯನು ನಮ್ಮ ಹರಿದ್ವೇಷಿಯಂತೆ ಸುವಿ ॥ ಗುರು ಶಿಷ್ಯನು ನಮ್ಮ ಹರಿದ್ವೇಷಿಯಂತೆ ವಾದಿ ಹರಿಭಕ್ತರೊಡನೆ ಕೋಪಂಗಳು ವ್ಯರ್ಥವಾಯಿತು ಸುವಿ ॥ ೧೧ ॥ ಪಂಚವಾ ಭೂತದೇಹ ಸಂಚಯರೆಲ್ಲ ಸನ್ಮೋಹನಾದ ಸಂಚಿತೆಯಾದ ಕರ್ಮಂಗಳು ಸಂಚಯರೆಲ್ಲ ಸುವಿ ॥ ಸಂಚಿತೆಯಾದ ಕರ್ಮಂಗಳು ಸಂ ಚಿಯರೆಲ್ಲ ಮುಕ್ತರಾದ ದೇಹದಲ್ಲಿ ಸುಖವು ಸನ್ಮೋಹನಂತೆ ಸುವಿ ॥ ॥ ೧೨ ॥ ಶರೀರದಲ್ಲಿ ಯೆಪ್ಪತ್ತೆರಡುಸಾವಿರ ನಾಡಿಗಳಿಂದ ಪಿರಿಯುವಾದವು ನೂರೆಂಟು ಐದು ಸುವಿ ॥ ಪಿರಿಯುವಾದವು ನೂರೆಂಟು ಐದು ಮೂರು ಒಂದು ಈಸರಿಯಲ್ಲಿ ಹ್ಯಾಗಿಪ್ಪುವದಂತೆ ಸುವಿ ॥ ೧೩ ॥ ಇಳಾನಾಡಿ ಸಾವಿರ ಶೀಳುಮಾಡಿ ಅದರ ಶೀಳುಮಾಡೀರೇಳು ಎರಳನಂತೆ ಸುವಿ ॥ ಶೀಳುಮಾಡಿರೇಳು ಎರಳನಂತೆ ನಾಡಿ ಕೆಳಗೆ ದೇಹ ರಕ್ತವರ್ಣ ನಾರಾ ಯಣಾನಿಹ ಸುವಿ ॥ ೧೪ ॥ ಒಂದು ನಾಡೀ ಪೆಸರು ಸುಷುಮ್ನನಾಡಿ ರಂಧ್ರದೊಳು ರಂಧರದ ಕಡೆಯಲ್ಲಿ ರಂಧನವಂತೆ ಸುವ್ವಿ ॥ ರಂಧರದ ಕಡೆಯಲ್ಲಿ ರಂಧನವಂತೆ ನಾಡಿ ಕೆಳಗೆರಡಂಗುಲದ ಮೇಲೆ ಹನ್ನೆರಡಂತೆ ಸುವ್ವಿ ॥ ೧೫ ॥ ಹೊಕ್ಕುಳೊ ಆರುದಳ ಇಕುರುಕ್ತಿ ವೃಂದರೊಳು ತತ್ವ ನಾಥ ಪ್ರದ್ಯುಮ್ನ ತಾ ಮುಖ್ಯರಂತೆ ಸುವಿ ॥ ತತ್ವನಾಥ ಪ್ರದ್ಯುಮ್ನ ತಾ ಮುಖ್ಯರಂತೆ ಅಗಿ ಪಿಂಗಳವರ್ಣನು ಯೆಂದು ಹಿಂಗದಿಹ ಸುವಿ ॥ ೧೬ ॥ ಎಂಟು ದಳ ಕೆಂಪು ಅಲ್ಲ್ಯುಂಟು ಹೃದಯುಕಮಲ ವೈಕುಂಠಪತಿ ಚತು ರ್ನರ ಮಂಟಪವೆ ಸುವಿ ॥ ವೈಕುಂಠಪತಿ ಚತುರ್ನರ ಮಂಟಪದ ಮಧ್ಯ

ದಲ್ಲಿ ವಾಯು ಜೀವರಿಗೆ ಸಾಯುಜ್ಯಪ್ರವಂತೆ ಸುವಿ ॥ ೧೭ ॥ ಕೂದಲ ಕೊನೆಯ ಹತ್ತು ಸಾವಿರ ಇದ ಅಗಲೆಂದು ಅಂದು ಜೀವಪರಿಮಾಣ ಲಿಂಗ ಕಂಡ್ಯ ಸುವಿ ॥ ಅಂದು ಜೀವಪರಿಮಾಣ ಲಿಂಗ ಕಂಡ್ಯ ದಂದ ರೊಳ ಅಂಗುಷ್ಠದಷ್ಟು ದೇಹ ಅಂಗವಂತೆ ಸುವಿ ॥ ೧೮ ॥ ಸ್ಥೂಲಂಗುಷ್ಠ ಪರಿಮಾಣ ಪ್ರಜ್ಞನಾಥ ನಾರಾಯಣ ಹೃದಯಕಮಲದ ಒಳಗೆ ವಿಮಲ ನಂತೆ ಸುವಿ । ಹೃದಯಕಮಲದ ಒಳಗೆ ವಿಮಲನಂತೆ ಜೀವಂಗೆ ಗಾಢರೂ ಪದಲ್ಲಿ ಹರಿ ತಾ ರಕ್ಷಿಪನಂತೆ ಸುವಿ ॥ ೧೯ ॥ ಇಳಾನಾಡಿ ಪೂರ್ವಪಿಂಗಳ ದಕ್ಷಿಣೆಲಿ ತ್ರಸೂತಿಯಲಿ ವಜ್ರಕ್ಕಾಗಿತಗಳೆ ಸುವಿ ॥ ಪ್ರಸೂತಿಯಲಿ ವಜ್ರಕ್ಕಾಗಿತಗಳೆ ಬ್ರಹ್ಮನಾಡಿ ಸುತ್ತ ಪಂಚನಾಡಿಗಳ ಸುತ್ತ ಪಂಚರೂ ಪಗಳೆ ಸುವಿ ॥ ೨೦ ॥ ದಕ್ಷಿಣಾಕ್ಷಿಯಲ್ಲಿ ಲಕ್ಷಣ ವಿಶ್ವಮೂರ್ತಿ ಶಿಕ್ಷಕ ನಾಗಿ ಜೀವರಹಂಸಕೆ ರಕ್ಷಕನೆ ಸುವಿ ॥ ಶಿಕ್ಷಕನಾಗಿ ಜೀವರಹಂಸಕೆ ರಕ್ಷಕನೆ ಜಾಗರಗಾಣಿಸುವರ್ಕಗಿ ಸ್ವಪ್ನಭಾಗ್ಯ ಸುವಿ ॥ ೨೧ ॥ ಈದೇವರ ಪ್ರಾಜ್ಞನಾದ ಹರಿಯ ಕೂಡಿ ನಿದಾನಿಸಲು ಜೀವಂಗೆ ಸುಖತೇಜಸವು ಸುವಿ ॥ ನಿದಾನಿಸಲು ಜೀವಂಗೆ ಸುಖತೇಜ ಅನೇಕಾಗಿ ತೈಜಸನಲ್ಲಿ ಸ್ವಪ್ನಭಾಗ್ಯ ಸುವಿ ॥ ೨೨ ॥ ಕಂಠದೇಶದಲ್ಲಿ ಅಲ್ಲ್ಯುಂಟು ತೈಜಸಮೂರ್ತಿ ನರಕದ ಹತ್ತೊಂಭತ್ತು ಶಿರಗಳೆ ಸುವಿ ॥ ನರಕದ ಹತ್ತೊಂಭತ್ತು ಶಿರಗಳೆ ಶಿರಕರ ಮಧ್ಯದಲಿ ಕರಿಮುಖಹಸ್ತಿಯಾಗ್ಯಲಿಪ್ಪವದಂತೆ ಸುವಿ ॥ ೨೩ ॥ ಕಿರುನಾಲಿಗೆಯಲಿ ಯೆರಡುದಳ ಬಣಿವು ಅರವಿಂದದಲ್ಲಿ ಅನಿರುದ್ಧನಿಹ ಸುವಿ ॥ ಅರವಿಂದದಲ್ಲಿ ಅನಿರುದ್ಧನಿಹ ಹರಿಯು ಈಪರಿಯಲ್ಲಿ ತಿಳಿದವರು ಅಧಿಕಾರಿಗಳಂತೆ ಸುವಿ ॥ ೨೪ ॥ ಹುಬ್ಬುಗಳ ಮಧ್ಯದಲ್ಲಿ ಶುಭ್ರ ನಾಲ್ಕು ದಳದ ಕಮಲ ಒಬ್ಬನಾಥ ಪ್ರದ್ಯುಮ್ನ ತಾ ಲಬ್ಧವರ್ಣ ಸುವಿ ॥ ಒಬ್ಬ ನಾಥ ಪ್ರದ್ಯುಮ್ನ ತಾ ಲಬ್ಧವರ್ಣನಾಗಿ ಶುದ್ಧವಾದ ರೂಪಿನಿಂದ ಪ್ರಸಿದ್ಧ ಗಳೆ ಸುವಿ ॥ ೨೫ ॥ ಶಿರದ ಮೇಲೆ ಶುಭ್ರ ಹನ್ನೆರಡು ದಳದ ಕಮಲ ಅರುಣ ವರುಣ ನಾರಾಯಣನಿಹ ಸುವಿ ॥ ಅರುಣ ವರುಣ ನಾರಾಯಣ ಹರಿದು ಈಪರಿಯಲ್ಲಿ ತಿಳಿದವರು ಅಧಿಕಾರಿಗಳಂತೆ ಸುವಿ ॥ ೨೬ ॥ ಬ್ರಹ್ಮ ಹತ್ಯ ಶಿರಸ್ಪಂಚ ಸ್ವರ್ಣಸ್ತೇಯ ಭುಜದ್ವಯಂ ಸುರಾಪಾನ ಹೃದಾ

ಯುಕ್ತ ಗುರುತಲ್ಪ ಸುವಿ ॥ ಸುರಾಪಾನ ಹ್ಯದಾಯುಕ್ತ ಗುರುತಲ್ಪ ಕಟಿ ದ್ವಯಂ ತತ್ಸಂಯೋಗ ಪಾದ ಪಾಪರೂಪಗಳಿ ಸುವಿ ॥ ೨೭ ॥ ಪಾತಕ ಪ್ರತ್ಯಂಗಳು ಉಪಪಾತಕ ರೋಮಂಗಳು ಪಾಪಪುರುಷ ರಕ್ತನೇತ್ರ ನೀಲಪುರುಷ ಸುವಿ ॥ ಪಾಪಪುರುಷ ರಕ್ತನೇತ್ರ ನೀಲಪುರುಷ ನೀಲವೋ ಘಶ್ಯಾವು ಯೆನಿಸಬೇಕು ಸುವಿ ॥ ೨೮ ॥ ಪುರುಷ ಷೋಡಶನಾದ ಷಟ್ಕೋಣದಲ್ಲಿ ಪ್ರದ್ಯುಮ್ನ ತ್ರಿಕೋಣದಲಿ ಧ್ಯಾನ ಸಂಕರ್ಷಣ ಕೊಡುವ ಸುವಿ ॥ ತ್ರಿಕೋಣದಲಿ ಧ್ಯಾನ ಸಂಕರ್ಷಣ ಕೊಡುವ ದೇಹ ಪವಿತ್ರ ವಾಸುದೇವರಲ್ಲಿ ವಾಸನಂತೆ ಸುವಿ ॥ ೨೯ ॥ ಹನ್ನೆರಡಂಗುಲದ ಮೇಲೆ ಹನ್ನೆರಡು ದಳಕಮಲ ಪ್ರಸನ್ನರಿಗೆ ಮೋಕ್ಷ ಪ್ರಸನ್ನ ಕೊಡುವ ಸುವಿ ॥ ಪ್ರಸನ್ನರಿಗೆ ಪ್ರಸನ್ನ ಕೊಡುವ ತುರಿಯ ಸುತಳತಳದಲ್ಲಿ ನಿಧಾನಿಸಲು ಸುವಿ ॥ ೩೦ ॥ ಮುಖ್ಯಪ್ರಾಣ ನಮ್ಮ ಸೌಖ್ಯವಾದ ಬಂಧು ದುಃಖ ಪರಿಹಾರ ಸುಖ ಈವನೀಗ ಸುವಿ ॥ ದುಃಖ ಪರಿಹಾರ ಸುಖವೀವನೀಗ ಮರುತನ ರೂಪ ಹನುಮ ಭೀಮಸೇನ ಭೂಪನಂತೆ ಸುವಿ ॥ ೩೧ ॥ ಮೂರನೆ ಅವತಾರ ಶ್ರೀಮದಾನಂದತೀರ್ಥರು ವೀರವೈಷ್ಣವರಿಗಾಗಿ ಗುರುಗಳ ನಂಬಿದವರು ಸುವಿ ॥ ವೀರ ವೈಷ್ಣವರಿಗಾಗಿ ಗುರುಗಳ ನಂಬಿದವರು ಬೋಧಧ್ಯಾನವನ್ನು ಪೂರ್ಣಬೋಧ ಕೊಡುವ ಸುವಿ ॥ ೩೨ ॥ ಹಯವದನ ತನ್ನ ಪಾದದ ಬಳಿಯಲಿಟ್ಟು ಸಲಹುವ ಸುವಿ ॥ ೩೩ ॥

೧೨೯. ರಾಗ ಕೇದಾರಗೌಳ, ಆದಿತಾಳ.

ಯಾರಿಗೆ ಯಾರೋ ಕೃಷ್ಣ । ಶೂರಾ ಕುಮಾರನೇ ॥ ಪಲ್ಲ ॥ ಯಾರಿಗೆ ಯಾರೋ ನಿನ್ನ । ಹೊರತನ್ಯರ್ಪೊರೆವಾರೋ । ಧೀರಾ ಮಾರ ಜನಕಾ । ಕ್ರೂರಾಗೊಲಿದ ಧೊರೆ ॥ ಅನುಪಲ್ಲ ॥ ಸತಿಸುತಹಿತರೇನೋ । ಮತಿ ಭ್ರಾಂತಿಮಾಡಿಸುವರೋ ಶ್ರೀ । ಪತಿ ನೀನೆನಗೆ ಗತಿ ಕು । ಮತಿಯ ಬಿಡಿಸೀಗಾ ॥ ೧ ॥ ಆಶಾಪಾಶದ ಶಿಲುಕಿ । ಘಾಸಿಬಟ್ಟೆನೋ ಬಹಳಾ । ವಾಸುದೇವನೇ ನಿನ್ನ । ದಾಸಾನ ಮಾಡಿಸೆನ್ನಾ ॥ ೨ ॥ ಮಾಯಾಮಾಯದಿ ಮುಳುಗಿ । ಘಾಯಾವಾಯಿತೋ ಕಾಯಾ ಉ । ಪಾಯಾ ಯಾವದು ಪೇಳೋ । ರಾಯಾ ಹಯವದನಾ ॥ ೩ ॥ ೨೫ ॥

## ೧೩೨. ರಾಗ ಸೌರಾಷ್ಟ್ರ, ಏಕತಾಳ.

ಅನ್ಯಾಯ ಮಾತುಗಳಾಡದಿರಿ ಪರ ಹೆಣ್ಣುಗಳಿರಾ ಕೇಳಿ । ಪುಣ್ಯ
ವಂತರಾದ ಕಾರಣ ಕೃಷ್ಣನ ಕಣ್ಣಿಂದ ನೋಡಿದಿರಿ ॥ ಪಲ್ಲ ॥ ಕ್ಷೀರಸಾ
ಗರಶಾಯಿ ಆಗಿದ್ದವನು ಪಾಲು ಸೋರೆ ಕದ್ದದ್ದು ನಿಜವೇ । ನಾರಿ ಇಂದಿರೆ
ಮನಕೆ ಬಾರದ ಸ್ವರಮಣ ಪರರ ನೆರೆದವನೇನೇ ॥ ವಾರಿಜೋದ್ಭವಾದ್ಯ
ರಲಿ ನೆಲೆಸಿಹನು ಸೇರೋನೆ ಸಣ್ಣವರ । ಸೂರ್ಯನಂತೆ ತೇಜದವ
ಬಂದು ನಿಶಿಯಲಿ ಸೂರಲಿ ನಿಂತನೇನೇ ॥ ೧ ॥ ಕಾಲಯವನನ ಕೂಡೆ
ಕಲಹ ತೊಟ್ಟವ ನಿಮ್ಮ ಬಾಲರ ಬಡಿವನೇನೇ । ಮೂಲೋಕವನೆಲ್ಲ
ಭಾರ ಪೊತ್ತಿಹ ಹರಿ ತಾನು ಆಳುಗಳೇರುವನೇನೇ ॥ ವಾಲಾಯುದಿ ಸುರ
ರಿಗೆ ಸುಧೆಯನಿತ್ತ ಗೋಪಾಲ ಮೊಲೆಯನುಂಬುವನೇನೇ । ಪೇಳಲಿ
ನ್ನೇನು ದನುಜಕುಲಾಂತಕ ಹರಿ ಮೂಲೆಯಲಡಗುವನೇನೇ ॥ ೨ ॥
ಸುರರು ಸ್ತುತಿಸೆ ತುಟಿಮಿಸುಕದವ ತಾನು ಬರಿಮಾತನಾಡುವನೇ । ಕರಿ
ರಾಜ ಕರೆದರೇ ಓಡಿಬಂದವ ನೀವು ಕರೆಯಾದೆ ಬರುವನೇನೇ ॥ ಸ್ಥಿರ
ವಾದ ವೈಕುಂಠದರಸನೆನಿಸುವ ಸ್ವಾಮಿ ಕೇರಿ ಭಾವಿ ತಿರುಗುವನೇ ।
ಸ್ಮರನ ಪೆತ್ತ ಹರಿ ತಾನು ಪರಿಹಾಸವನು ಮಾಡಿ ತರುಣೇರ ವಲಿಸುವ
ನೇನೇ ॥ ೩ ॥ ಪುಣ್ಯ ಪ್ರೇರಿಸುವ ದೇವರ ದೇವನು ಪರಹೆಣ್ಣಿನಪ್ಪಿಕೊಂ
ಬನೇ । ಉಣ್ಣಲು ತಾನೇನೊಲ್ಲದ ನಿತ್ಯತೃಪ್ತ ಬೆಣ್ಣೆಯ ಮೆಲುವನೇನೇ ॥
ಕಣ್ಣಿಗೆ ಕಾಣದ ಚಿನುಮಯನು ಸರ್ವದ ನಿಮ್ಮನೆಯೊಳಿಪ್ಪನೇನೇ ।
ಚೆನ್ನಾರಚೆಲುವ ಕಾಮನ ಪಿತನವನು ನಿಮ್ಮನು ಅಣಕಿಸಿ ಆಡುವನೇನೇ ॥
॥ ೪ ॥ ಮೃದುವಾದ ಉರಗತಲ್ಪನು ತಾನು ಹಸಿ ಬಾಣಂತಿಯ ಅಗಟ
ಮಂಚದೊಳಿಪ್ಪನೇ । ಎದೆಯಲಿ ಕೌಸ್ತುಭ ಧಗಧಗಿಸುವ ನಿಮ್ಮ ವಸ್ತು
ಗಳ ಕಳುವನೇನೇ ॥ ಮದನಾರಿಗೆ ತಾನು ಅದ್ಭುತವ ಮಾಡಿದವ ಇದು
ಆತನ ಲೀಲೆಯೋ । ಪದುಮಾಕ್ಷ ಸಿರಿಹಯವದನರಾಯನ ಭಜಿಸಿ
ಮುದದಿಂದ ನೀವ್ ಬಾಳಿರೇ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೩೧. ರಾಗ ಕಾಂಬೋಧಿ, ಝಂಪೆತಾಳ.

ಏನು ಸತ್ಯವ ಮಾಡಲೀ ಮತವು ಹರಿಯುದೆಂದು ಎಲ್ಲರಿಗೆ ಸಮ್ಮತವಾಗೇ ॥ ಪಲ್ಲ ॥ ಏವಿತದ್ವಾರದೊಳಿಲ್ಲ ವಿಷ್ಣು ಉತ್ತಮನೆಂದು ವೇದಗಳ ನುಡಿಸಲೀ । ಅಧಿಕಾರಿಗಳಿಗರಸು ಅಂಬುಜಸಂಭವನೆಂದು ಆಗಮಗಳ ಮೆಳೆಗರಿಸಲೀ ॥ ೧ ॥ ಪರಲೋಕ ಸಾಧನಕೆ ತಾರತಮ್ಯ ಮತವೆಂದು ಗರಳವನು ನಾ ಭುಜಿಸಲೀ । ಹರಿದಿನಕಮರದಿನವು ಪರದಿನವಲ್ಲೆಂದು ಹರಿವ ಹಾವನು ಪಿಡಿಯಲೀ ॥ ೨ ॥ ಭಾಗವತಶಾಸ್ತ್ರವೆ ಬಹಳ ಭಾಗ್ಯದವೆಂದು ಭಾರ ಶಿರದಲಿ ಧರಿಸಲೀ । ಭಾಗವತ ನಿಂದಕಗೆ ಬಹು ನರಕವೆಂತೆಂದು ಪರ್ವತಾಗ್ರದಿಂ ಧುಮುಕಲೀ ॥ ೩ ॥ ಶ್ರೀಮಧ್ವಶಾಸ್ತ್ರವೇ ಸಕಲ ಶಾಸ್ತ್ರಕಧಿಕೆಂದು ಶ್ರೀತುಲಸಿಯ ನಾ ಸ್ಮರಿಸಲೀ । ತಾಮಸಮತಜಾಲವೆಲ್ಲ ವೇದವಿರುದ್ಧವೆಂದು ವಾರಿಧಿಯೊಳು ನಾ ಬೀಳಲೀ ॥ ॥ ೪ ॥ ಶ್ರೀಮಧ್ವರಾಯರೇ ಆತ್ಮರಕ್ಷಕರೆಂದು ಅನಲವನು ನಾ ಪಿಡಿಯಲೀ । ಕಾಮಿತಫಲವೀವನು ಶ್ರೀಹಯವದನನೆಂದು ಅಶರೀರಿಯ ನುಡಿಸಲೀ ॥ ೫ ॥ ಶ್ರೀಃ ॥

೧೩೨. ರಾಗ ನಾಟಿ, ಆದಿತಾಳ.

ಜಯ ಜಯ ಶ್ರೀಹಯವದನ ಜಯ ಜಯ ಶ್ರೀಖಳದಮನ । ಜಯತು ಸಜ್ಜನಸದನ ಸಕಲ ಆಭರಣಾ ॥ ಪಲ್ಲ ॥ ರಾಘವಾನ್ವಯಸೋಮ ಖರನಿಶಾಚರಭೀಮ । ಸಕಲ ಸದ್ಗುಣಧಾಮ ಸೀತಾಭಿರಾಮಾ ॥ ಕಾಮಿನಿಜನಕಾಮ ಶರಣಪಾಲಕ ಧಾಮ । ಸ್ವಬಲಪಾಲಿತ ರಾಮ ಪಟ್ಟಾಭಿರಾಮಾ ॥ ೧ ॥ ಯಾದವಾನ್ವಯ ಜಾತವ ರಸತ್ಯಭಾಮೇತ । ವ್ಯಾಸರಾಯ ಸನ್ನುತ ಸಕಲ ವಾಗ್ವಿದಿತಾ ॥ ಕಂಜಾಸನಾದಿನುತ ಕಮಲಮಾರ್ಗಣಪಿತ । ಸರಸ ರುಕ್ಮಿಣಿಕಾಂತ ಸಕಲೇಷ್ಟದಾತಾ ॥ ೨ ॥ ವಾಸಿಷ್ಠಕುಲವಾರ್ಧಿ ಸತ್ಯಳಾಧರರೂಪ । ಮಧ್ವಾಚಾರ್ಯ ಸದ್ರೂಪದಳಿತ ಬಹುತಾಪಾ ॥ ಮಾಯಿಜನ ಭೃತಕೋಪ ಕೃತಸದ್ವಿಪ್ರೋದ್ವೇಷ । ಸ್ವರವಿಸತ್ಸುಖರೂಪ ಹಯವದನ ರೂಪಾ ॥ ೩ ॥ ಶ್ರೀಃ ॥

## ೧೩೩. ರಾಗ ಖರಹರಪ್ರಿಯ, ರೂಪಕತಾಳ.

ಯಾವ ಕುಲವೋ ಕೃಷ್ಣ ನಿನ್ನರಿಯಲಾರದೂ ॥ ಪಲ್ಲ ॥ ಗೋಕುಲದಲ್ಲಿ ಪುಟ್ಟಿದನಂತೆ ಗೋವು ಕಾವ ಗೊಲ್ಲನಂತೆ । ತಾ ಕೊಳಲನೂದಿ ಮೃಗಪಕ್ಷಿಗಳ ಮರುಳುಮಾಡಿದನಂತೇ ॥ ೧ ॥ ಗೊಲ್ಲತೇರ ಮನೆಯ ಪೊಕ್ಕು ಕಳ್ಳನೆನಿಸಿಕೊಂಡನಂತೆ । ಮೆಲ್ಲನೆ ಪೂತನಿಯಸುವ ಹೀರಿ ಬಲ್ಲಿದ ತೃಣನ ಕೊಂದನಂತೇ ॥ ೨ ॥ ಕಾಲಲ್ಲಿ ಶಕಟನ ಒದ್ದನಂತೆ ಗೂಳಿಯ ಕೊಂಬನ್ನು ಕಿತ್ತಿಟ್ಟನಂತೆ । ಕಾಳಿಂಗನ ಹೆಡೆಯ ತುಳಿದನಂತೆ ಭಾಮೆಯರಿಗೆ ತಾನೊಲಿದನಂತೇ ॥ ೩ ॥ ಸರ್ಪ ತನ್ನ ಹಾಸಿಗೆಯಂತೆ ಪಕ್ಷಿ ತನ್ನ ವಾಹನವಂತೆ । ಮುಪ್ಪುರಹರ ಮೊಮ್ಮಗನಂತೆ ಮುದ್ದು ಮುಖದ ಚೆನ್ನಿಗನಂತೇ ॥ ೪ ॥ ದುರುಳತನದಿ ಒರಳ ಸೆಳೆದು ದುರುಳ ರಕ್ಕಸರನ್ನು ಕೆಡಹಿ । ಇರುಳು ಹಗಲು ಪೊರೆವ ನಮ್ಮ ಹಯವದನರಾಯನಂತೇ ॥ ೫ ॥

## ೧೩೪. ರಾಗ ಮೋಹನ, ಏಕತಾಳ.

ಆವರೀತಿಯಿಂದ ಯೆನ್ನ ನೀ ಪಾಲಿಸೋ । ಶ್ರೀವಿಭು ಹಯವದನಾ ॥ ಪಲ್ಲ ॥ ಈವಿಧ ಭವದಲ್ಲಿ ಇಷ್ಟು ಬಳಲಿ ನೊಂದೆ । ತಾವರೆದಳ ನಯನಾ । ಶ್ರೀಹಯವದನಾ ॥ ಅನುಪಲ್ಲ ॥ ಅಂಗನೇಯರಲ್ಲಿ ಅಧಿಕ ಸ್ನೇಹದಿಂದ । ಶೃಂಗಾರಂಗಳನೆ ಮಾಡೀ ॥ ಮಂಗಳಾಂಗನೆ ನಿನ್ನ ಮಹಿಮೆ ಪೊಗಳದೆ ಯಮ । ಭಂಗಕ್ಕೆ ಒಳಗಾದೆನೋ । ಶ್ರೀಹಯವದನಾ ॥ ೧ ॥ ಕಾಮನ ಬಾಧೆಯ ತಡೆಯಲಾರದೆ ಕಂಡ । ಕಾಮಿನಿಯರನೆ ಕೂಡೀ ॥ ನೇಮನಿಷ್ಠೆಯಿಂದ ನಿನ್ನನು ಭಜಿಸದೆ । ಪಾಮರ ನಾನಾದೆನೋ । ಶ್ರೀಹಯವದನಾ ॥ ೨ ॥ ಹೀನಜನರ ಸಂಗ ಹಯಮುಖ ದೇವನೇ । ಮನ್ನಿಸುವಂತೆ ಮಾಡೋ ॥ ಜ್ಞಾನಿಗಳರಸ ನೀ ದಯವಿಟ್ಟು ಯೆನ್ನನು । ಧ್ಯಾನಿಸುವಂತೆ ಮಾಡೋ । ಶ್ರೀಹಯವದನಾ ॥ ೩ ॥

## ೧೩೫. ರಾಗ ಪಂತುವರಾಳಿ, ಅಟತಾಳ.

ಎನ್ನ ಮನದ ಡೊಂಕು ತಿದ್ದಯ್ಯ ಗೋಪಾಲಕೃಷ್ಣ ॥ ಪಲ್ಲ ॥ ಎನ್ನ ಮನದ ಡೊಂಕು ತಿದ್ದಿ ಮುನ್ನ ಮನ್ನಿಸದಿರು ತಿದ್ದಿ । ಬನ್ನಪಡಲಾರೆ

ಭವಾಬ್ಧಿಯನ್ನೆ ದಾಟಿಸೋ ಪಾರಮಹಿಮಾ ॥ ಅನುಪಲ್ಲ ॥ ಉದಯವಾದರೆ ಊಟದ ಚಿಂತೆ ಉಂಡ ಮೇಲೆ ಭೋಗದ ಚಿಂತೆ । ಆದರ ಮೇಲೆ ಹದಿನಾಲ್ಕು ಲೋಕಂಗಳನೆ ಆಳ್ವ ಚಿಂತೇ ॥ ೧ ॥ ಸುಖವು ಬಂದರೆ ನಾನೆ ಸಮರ್ಥ ದುಃಖವು ಬಂದರೆ ಹರಿಯು ಮಾಡ್ದ । ರೊಕ್ಕ ಬಂದರೆ ನಾನೆ ಧನಿಕ ಶಿಕ್ಕುಬಿದ್ದರೆ ಹರಿಯ ವ್ಯಾಪಾರಾ ॥ ೨ ॥ ತಿಳಿದು ತಿಳಿದು ಪತಂಗದ್ಹುಳವು ಕಿಚ್ಚಿನಲ್ಲಿ ಬೀಳೋ ಹಾಂಗೆ । ಕಾಲ ಕಳೆದೆ ಮೂಕನಂತೆ ಮುದ್ದು ಹಯವದನನೆ ದಯದಿ ನೋಡಿ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೩೬. ರಾಗ ಕಾಂಬೋಧಿ, ಝಂಪೆತಾಳ.

ಗುರುಹಿರಿಯರನುಸರಿಸಿ ಹರಿಯ ಮನದೊಳಗಿರಿಸಿ । ಪರಗತಿಯ ಬೇಗ ಸಾಧಿಸಿಕೊಳ್ಳಿರೋ ॥ ಪಲ್ಲ ॥ ಲೆಕ್ಕವಿಲ್ಲದ ದೇಹವೆಂಬ ಸೆರೆಮನೆಯೊಳಗೆ । ಸಿಕ್ಕಿ ಬಹುಕಾಲ ಬಳಲಿದಿರೀ ॥ ರಕ್ಕಸಾರಿಯ ಭಕ್ತರೊಳು ಸೇರಿ ಸೆರೆ । ಯಿಕ್ಕುದಂತವನ ಮರೆಹೊಗಿರೋ ॥ ೧ ॥ ಕಂಬಳಿಯ ಬುತ್ತಿಯಂತೀ ದೇಹದೊಳು ಸುಖ । ವೆಂಬೋದೆಲ್ಲವು ದುಃಖಭರಿತವೂ ॥ ಅಂಬುಜಾಕ್ಷನ ದಿವ್ಯಮಂಗಳ ಕಥಾಮೃತವ । ನುಂಬ ಸಂಭ್ರಮಕೆ ಸರಿಗಾಣೆನೋ ॥ ೨ ॥ ಮಕ್ಕಳುಗಳಳುವಾಗ ಮಡದಿಯರು ಜರೆವಾಗ । ಭಿಕ್ಷುಕರು ಬಂದು ಬೈಯ್ಯುವಾಗಾ ॥ ಇಕ್ಕಿ ಪೊರೆವುದಕೆ ಗತಿಯಿಲ್ಲದವರಿಗೆ । ಸೌಖ್ಯವೆತ್ತಣದೋ ಮನುಜರಿಂಗೇ ॥ ೩ ॥ ಕಾಯಿ ಮಾರಿ ಕೊತ್ತಿಕೊಂಬ ಪಾಮರನಂತೆ । ಹೇಯಕುಜನರ ಚರಣಕೆರಗೀ ॥ ಶ್ರೀಯರಸನಂಘ್ರಿಗಳ ನೆನೆಯಲೊಲ್ಲದ ನರನ । ಆಯುಷ್ಯ ಬರಿದೇ ಹೋಯಿತಲ್ಲಾ ॥ ೪ ॥ ಐವರಿತ್ತೊಡವೆಯನು ಅವರವರು ವೈವರು ಮ । ತ್ತೈವರೆಂಬುವರು ತೊಲಗುವರೂ ॥ ನೀವು ಹತ್ತಿರ ಕೂಟವರಿದು ಪೋಷಿರಿಸಿಮ್ರ । ಕೈಬಿಡದೆತ್ತುವರ ನಾನು ಕಾಣೇ ॥ ೫ ॥ ಕಾಲಗುಂದಿದ ಮೇಲೆ ರೋಗರುಜೆಗಳೆಂಬ । ಕಾಲನಾ ಭಟರು ಬಂದು ಕವಿದೂ । ಸಾಲಾಗಿ ನಿಂತಾಗ ಮುಖ ಗಂಟಲೊಳಗಿನ । ನಾಲಿಗೆಗೆ ನಾದವೆಲ್ಲಿಹುದೋ ॥ ೬ ॥

ಈಗಲೇ ಹರಿನಾಮವು ನಾದದಿಂದೆಚ್ಚತ್ತು । ನಾಗಶಯನನಾ ಪುರಪಥವಾ। ಆಗಮಜ್ಞರ ಕಯ್ಯ ಕೇಳಿಕೊಳ್ಳಿರೊ ನಿಮಗೆ। ಈಗಾಳಿಯಾ ದೀಪವು ಸ್ಥಿರವು ಅಲ್ಲಾ ॥ ೭ ॥ ಜರೆ ಬಂದು ಕಡೆಯಲ್ಲಿ ಘುರುಘುರೆನಿಸುವ ವ್ಯೈಯ್ಯ । ಶರೀರ ಸಂಬಂಧಿಗಳ ಕಾಟಾ । ತರುಣಿಯರ ಮೇಲಾಸೆ ತಪ್ಪ ಹಿತವರಿಯದೆ। ಬರಿದೆ ಭವದಲ್ಲಿ ಬಳಲಿದಿರೀ ॥ ೮ ॥ ವೇದಶಾಸ್ತ್ರ ವನೋದಲಿಲ್ಲ ಜಪಹೋಮಾದಿ ಸಾಧುಕರ್ಮಗಳ ಸರಕು ಇಲ್ಲಾ । ಮಾಧವನ ಪೂಜೆಯನೊಮ್ಮೆ ಮಾಡಿದವರಲ್ಲ ಹರಿ । ಪಾದ ತೀರ್ಥ ವ್ರತಾದಿಗಳಿಲ್ಲಾ ॥ ೯ ॥ ಊರ್ಧ್ವಪುಂಡ್ರಗಳಿಲ್ಲ ಹರಿಯ ಲಾಂಛನವಿಲ್ಲ। ಪದ್ಮಾಕ್ಷಿ ತುಲಸಿಯಾ ಸರಗಳಿಲ್ಲಾ । ಸದ್ಧರ್ಮ ತಪವೆತ್ತ ವಿಷಯಾಂಧ ಕೂಪದೊಳು । ಬಿದ್ದು ಪೊರಳುವಾ ಮರುಳದೆತ್ತಾ ॥ ೧೦ ॥ ಏಕಾದಶಿಯ ಮಾಡಿ ಯತಿಗಳನೊಡನಾಡಿ । ಪೋಕವೃತ್ತಿಗಳ ನೀಡಾಡೀ । ಶ್ರೀಕಾಂತ ನನು ಬೇಡಿ ಸುಕೃತಿಗಳೊಡಗೂಡಿ । ಅಕ್ಕೃಷ್ಣನಂಘ್ರಿಗಳನೆ ಪಾಡೀ॥ ೧೧ ॥ ಉಕ್ಕಿ ಹರಿಯಂ ಪೊಗಳಿ ಅವನಂಗಣದಿ ಪೊರಳಿ । ಶುಷ್ಕತರ್ಕಗಳ ಮೇಲೆ ಉಗುಳೀ । ಭಕ್ತಿ ಜ್ಞಾನಂಗಳಿಂದಲಿ ಮತ್ರ್ಯಪಥದಿಂ ಮರಳಿ । ಮುಕ್ತಿ ಮಾರ್ಗದಲಿನ್ನು ತೆರಳೀ ॥ ೧೨ ॥ ಕೊಳ್ಳಿ ನಾಯಕ ಬಂದು ಕೋಟೆ ಕೆಡಹದ ಮುನ್ನ । ಕಳ್ಳರೈವರ ಕಾಟದಿಂದಾ । ಉಳ್ಳ ಪುಣ್ಯಾರ್ಥ ಕೊಳ್ಳೆ ಪೋಗದ ಮುನ್ನ । ಫುಲ್ಲನಾಭನ ಬೇಗ ಮರೆಹೊಗಿರೋ ॥ ॥ ೧೩ ॥ ಮಲಮೂತ್ರ ರಕ್ತಮಾಂಸಗಳ ಬಲದಲಿ । ಯೆಲುವಿನಾ ಬಲದಿ ಗೂಡುಮಾಡೀ । ಬೆಳೆಸಿದೀ ತನುವೆಂಬ ನರಕದಾಸೆಯ ಬಿಟ್ಟು । ಜಲ ಜನಾಭನ ಪಾದವನು ಸೇರಿರೋ ॥ ೧೪ ॥ ಒಂಭತ್ತು ಛಿದ್ರವುಳ್ಳ ದೇಹ ವೆಂಬ ಮಡಿಕೆಯಲಿ । ತುಂಬಿರುವ ವಾಯು ಸ್ಥಿರವು ಅಲ್ಲಾ । ನಂಬಿ ಕೊಂಡಿರಬೇಡಿ ಹಿರಿಹಯವದನನ ಪಾ । ದಾಂಬುಜವನು ಸೇರಿ ಬದು ಕಿರೋ ॥ ೧೫ ॥ ಶ್ರೀಃ ॥

ರಾಗ ೧೩೭. ರಾಗ ಧನ್ಯಾಸಿ. ಆದಿತಾಳ.

ನಾರಾಯಣ ನಾರಾಯಣ ನಾರಾಯಣ ನಾರಾಯಣ ನಾರಾ ಯಣ ಲಕ್ಷ್ಮಿ ಅರಸನೆ। ನಾರಾಯಣ ಲಕ್ಷ್ಮಿ ಅರಸನೆ ಹಯವದನಸ್ವಾಮಿ

ನೀನೊಲಿದು ದಯವಾಗೋ ॥ ಪಲ್ಲ ॥ ನಿಗಮವ ಕದ್ದೊಯ್ದ ಖೂಳ
ದೈತ್ಯನ ಕೊಂದು ಆಗಮವ ತಂದು ಅಜಗಿತ್ತೆ । ಆಗಮವ ತಂದು ಅಜ
ಗಿತ್ತ ಹಯವದನ ಆದಿಮೂರುತಿಯೋ ದಯವಾಗೋ ॥ ೧ ॥ ಕೂರ್ಮ
ರೂಪದಿ ಬಂದು ಆಗಿರಿಯನೆತ್ತಿದೆ ಪ್ರೇಮಾದಿ ಸುರರೀಗಮೃತಾವ ।
ಪ್ರೇಮಾದಿ ಅಮೃತವನಿಕ್ಕಿದ ಹಯವದನ ಪ್ರೇಮಾ ನೀ ಯೆನಗೇ ದಯ
ವಾಗೋ ॥ ೨ ॥ ಕ್ರೋಡರೂಪದಿ ಬಂದು ಮೂಢದೈತ್ಯನ ಕೊಂದೆ
ರೂಢಿಯನೆಗಹೀ ಅಜಗಿತ್ತೇ । ರೂಢಿಯನೆಗಹಿ ಅಜಗಿತ್ತ ಹಯವದನ
ಪ್ರೌಢ ನೀ ಯೆನಗೇ ದಯವಾಗೋ ॥ ೩ ॥ ಶಿಶುವ ಬಾಧಿಸುತಿರ್ದ ಕಶಿ
ಪನ್ನ ಸೀಳಿ ನೀ ಕುಶಲದಿಂ ಕರುಳಮಾಲೀಯ । ಕುಶಲದಿಂ ಕರುಳಮಾ
ಲೆಯ ಧರಿಸಿದ ಹಯವದನ ಬಿಸಜಾಕ್ಷ ಯೆನಗೆ ದಯವಾಗೋ ॥ ೪ ॥
ವಾಮನರೂಪದಿ ಬಂದು ಭೂಮಿ ಓರಡಿಮಾಡಿ ವ್ಯೋಮಕ್ಕೆ ಚರಣಾವ
ನೀಡೀದೇ । ವ್ಯೋಮಕ್ಕೆ ಚರಣಾವ ನೀಡಿದ ಹಯವದನ ವಾಮನ ಯೆನಗೆ
ದಯವಾಗೋ ॥ ೫ ॥ ಕೊಡಲಿಯ ಪಿಡಿದು ಕಡಿದೆ ದುಷ್ಟನೃಪರ ಹಡದ
ತಂದೆಯ ಮಾತು ಸಲಿಸೀದೆ । ಹಡದ ತಂದೆಯ ಮಾತು ಸಲಿಸೀದ
ಹಯವದನ ಒಡೆಯ ನೀ ಯೆನಗೆ ದಯವಾಗೋ ॥ ೬ ॥ ಸೀತೆಗೋ
ಸುಗ ಪೋಗಿ ಸೇತುವೆಯ ಕಟ್ಟಿ ಭೂತರಾವಣನಾ ಮಡುಹೀದೇ ।
ಭೂತರಾವಣನ ಮಡುಹೀದ ಹಯವದನ ಖ್ಯಾತಾ ನೀ ಯೆನಗೇ ದಯ
ವಾಗೋ ॥ ೭ ॥ ಗೊಲ್ಲರ ಒಡನಾಡಿ ಬಲ್ಲಿದ ಕಂಸನ ಸದೆದು ಮಲ್ಲರೆ
ಲ್ಲಾರ ನೀ ಮಡುಹೀದೇ । ಮಲ್ಲರೆಲ್ಲಾರ ಮಡುಹೀದ ಹಯವದನ
ವಲ್ಲಭ ಯೆನಗೆ ನೀ ದಯವಾಗೋ ॥ ೮ ॥ ತ್ರಿಪುರಾರ ಸತಿಯರಿಗೆ ಉಪ
ದೇಶವನಿಕ್ಕಿದೆ ತ್ರಿಪುರಾರನೆಲ್ಲಾ ಮಡುಹೀದೆ । ತ್ರಿಪುರಾರನೆಲ್ಲ ಮಡು
ಹೀದ ಹಯವದನ ನಿಪುಣ ನೀ ಯೆನಗೆ ದಯವಾಗೋ ॥ ೯ ॥ ತೇಜಿ
ಯನೇರಿ ರಾಹುತನಾಗಿ ನೀ ಮೆರೆದೆ ಮೂಜಗಕೆ ಕಲ್ಕಿಯೆಂದೆನಿಸೀ ।
ಮೂಜಗಕೆ ಕಲ್ಕಿಯೆಂದೆನಿಸೀದ ಹಯವದನ ಭೋಜಾ ನೀ ಯೆನಗೇ
ದಯವಾಗೋ ॥ ೧೦ ॥ ಅಂಗಜನೈಯನೆ ಮಂಗಳಮಹಿಮನೆ । ಗಂಗೆ
ಯ ಪೆತ್ತ ಗರುವನೆ । ಗಂಗೆಯ ಪೆತ್ತ ಗರುವನೆ ಹಯವದನ ತುಂಗವಿ
ಕ್ರಮನೆ ದಯವಾಗೋ ॥ ೧೧ ॥ ವಾದಿರಾಜರಿಗೊಲಿದು ಸೋದೆಪುರದಲಿ

ನಿಂತು ವೇದಾಂತದ ಕಥೆಯಾನರುಹೀದೆ । ವೇದಾಂತದ ಕಥೆಯನರು ಹೀದ ಹಯವದನ ಮಾಧವ ನೀ ಯೆನಗೇ ದಯವಾಗೋ ॥ ೧೨ ॥ ಮುತ್ತೈದೆಯರೆಲ್ಲ ಮುತ್ತಿನಾರಾತಿ ಪಿಡಿದು । ಹತ್ತಾವತಾರ ಹಯವದನ । ಹತ್ತಾವತಾರದ ಹಯವದನನ ಪಾಡುತ ಹೊಸ ಮುತ್ತಿನಾರಾತಿಯು ಬೆಳಗಿರಿ ಶೋಭಾನೆ ॥ ೧೩ ॥ ಶ್ರೀಃ ॥

## ೧೩೮. ರಾಗ ನಾದನಾಮಕ್ರಿಯೆ, ಆದಿತಾಳ.

ಎಣಿಸಲೆನ್ನಳವೆ ನಿನ್ನ ಮಹಿಮೆಗಳಾ । ಗುಣಗಣನುತ ನಾಮಾ ಕೋದಂಡರಾಮಾ ॥ ಪಲ್ಲ ॥ ಜಲದಿ ಸಂಚರಿಸಿದೆ ಬಲು ಗಿರಿಯ ಧರಿಸಿದೆ । ಲಲನೆ ಧರಿತ್ರಿಯ ಪೊರದೆ ॥ ಛಲದಿ ಹಿರಣ್ಯಕಶಿಪುವ ಸಂಹರಿಸಿದೆ । ಇಳೆಯಾಪೇಕ್ಷಿಸಿದೆ ಬಲಿಯ ಭಂಜಿಸಿದೆ ॥ ೧ ॥ ದುರುಳ ರಾಯರ ತರಿದೆ । ಹರನ ಬಿಲ್ಲ ಮುರಿದೆ ನರಗೆ ಸಾರಥಿಯಾಗಿ ಮೆರದೆ ॥ ತರುಣಿಯರ ವ್ರತಗೆಲಿದೆ । ತುರಗವನೇರಿ ಶರಣಾಗತರನ್ನು ಪೊರವುದು ನಿನ್ನ ಬಿರಿದೆ ॥ ೨ ॥ ಕರುಣಾಸಾಗರ ನಿನ್ನ । ಚರಣ ಸೇವೆಗೆ ಯೆನ್ನ । ಕರುಣಿಸು ಗುಣಸಂಪನ್ನ ॥ ಸ್ಮರನ ಜನಕ ಚೆನ್ನ । ಧರಜೆಯ ಮೋಹನ್ನ । ಸ್ಥಿರವಾದ ಲಕ್ಷ್ಮೀಶ ಕರುಣಿಸೊ ಹಯವದನ ॥ ೩ ॥ ಶ್ರೀಃ ॥

## ೧೩೯. ರಾಗ ತೋಡಿ, ಅಟತಾಳ.

ಆವಕಡೆಯಿಂದ ಬಂದೆ ವಾಜಿವದನನೆ । ಭಾವಿಸುವ ವಾದಿರಾಜ ಮುನಿಯ ಕಾಣುತಾ ॥ ಪಲ್ಲ ॥ ನೇವರಿಸಿ ವೈಯುತಡಿ ನೇಹದಿಂದಲಿ ಮೇಲು । ನೈವೇದ್ಯವನ್ನು ಇತ್ತು ಭಜಿಸುವೆ ॥ ಅನುಪಲ್ಲ ॥ ಭಕುತಿ ಕಡಲೆ ಜ್ಞಾನ ವೈರಾಗ್ಯ ಬೆಲ್ಲದಾ । ಮುಕುತಿ ಆನಂದಸುಖದ ಕ್ಷೀರ ಲಡ್ಡಿಗೆ ॥ ಯುಕುತಿ ಧ್ಯಾನ ಕೊಟ್ಟು ನೀನು ಯೆಲ್ಲ ಮಾತಿಲಿ । ಶಕುತಿ ಸಂತೋಷ ಮಹಿಮೆ ತೋರಬಂದೆಯಾ ॥ ೧ ॥ ಹೆತ್ತ ತುಪ್ಪ ಸಕ್ಕರೆಯ ಮಡ್ಡಿ ಮುದ್ದೆಯಾ । ತುತ್ತುಮಾಡಿ ಕೊಡಲು ಅದನು ಮೆಲುತ ಮೆಚ್ಚುತಾ ॥ ಅತ್ಯಂತ ಸಂತೋಷ ನೀನು ಆಟ ತೋರುತ । ಭೃತ್ಯವಾದಿರಾಜ ಮುನಿಯ ಸಲಹಬಂದೆಯಾ ॥ ೨ ॥ ಫಲವ ಕೊಟ್ಟು ರಕ್ಷಿಸಿದಿ ವಾಜಿ

ವದನನೆ । ನಿಲುವೊ ಜ್ಞಾನ ಭಕ್ತಿಯನ್ನು ನೀಡಬಂದೆಯಾ ॥ ಸುಲಭ ಸುಮುಖ ಸುಪ್ರಸನ್ನ ಹಯವದನನೆ । ಚೆಲುವ ಚಿನ್ಮಯಮೂರ್ತಿ ನಮ್ಮ ಸಲಹ ಬಂದೆಯಾ ॥ ೩ ॥ ಶ್ರೀ ॥

## ೧೪೦. ರಾಗ ಕಾಂಬೋಧಿ, ಝಂಪೆತಾಳ.

ತಾಳುವಿಕೆಗಿಂತ ತಪವಿಲ್ಲ ಮನವೆ । ಇದರೊಳ್ । ಹೇಳವರೇನು ಒಂದಿಷ್ಟು ಹುರುಡಿಲ್ಲ ॥ ಪಲ್ಲ ॥ ದುಷ್ಟ ಮನುಜರು ಪೇಳ್ವ ನಿಷ್ಠುರನುಡಿ ತಾಳು । ಕಷ್ಟಬಂದಲ್ಲಿ ಕಂಗೆಡದೆ ಧೈರ್ಯವ ತಾಳು ॥ ಇಷ್ಟ ಫಲ ನಾಗೊ ತನಕ ಶಾಂತವ ತಾಳು । ನೀ । ಕಟ್ಟು ಬುತ್ತಿಯ ಉಣ್ಣಲು ಬಹುದು ಜಾಣಾ ॥ ೧ ॥ ಹರಿದು ಹಂಗಿಸುವ ಹಗೆಯವರ ಮಾತನೆ ತಾಳು । ದುರುನುಡಿಯ ಕುಹಕಮಂತ್ರ ಚೇಷ್ಟೆಯನು ತಾಳು ॥ ಬಿರುನುಡಿಯ ಬಿಂಕ ಬಿರುದಿನ ವಾರ್ತೆಯ ತಾಳು । ನಿರುತ ಕ್ಷಣಭಂಗುರ ಎದೇಹ ತಾಳೂ ॥ ೨ ॥ ನಕ್ಕು ನುಡಿವರ ಮುಂದೆ ಮುಕ್ಕಲಿಸದಿರು । ಉಕ್ಕೊ ಹಾಲಿಗೆ ನೀರು ಇಕ್ಕಿದಂದದಿ ತಾಳು ॥ ಬೆಕ್ಕು ಇಲಿ ಹೊಂಭಾಕಿದಂತೆ ತಾಳು । ಯಮಗೆ । ಸಿಕ್ಕದಂದದಿ ಶ್ರೀಹಯವದನನ ಕೂಡು ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೪೧. ರಾಗ ಸಾವೇರಿ, ತ್ರಿಪುಟತಾಳ.

ನಿನಗೆ ನೀನೆ ಕೃಷ್ಣ ದಯಮಾಡಿ ಸಲಹಯ್ಯ । ಎನಗೊಂದು ಸಾಧನಾ ಲೇಸು ಕಾಣಬಾರದೂ ॥ ಪಲ್ಲ ॥ ಸ್ನಾನಮಾಡಿಯೆ ನಿನ್ನ ಸಂಪಾದಿಸೇನೆಂದರೆ । ಸ್ನಾನಮಾಡದೇ ಕಪ್ಪೆ ಸರ್ವಕಾಲದಲಿ । ಧ್ಯಾನ ಮಾಡಿಯೇ ನಿನ್ನ ಸಂಪಾದಿಸೇನೆಂದರೆ ಧ್ಯಾನಮಾಡದೆ ಬಕಪಕ್ಷಿಯು ಸರ್ವದಾ ॥ ೧ ॥ ಜಪವ ಮಾಡಿಯೇ ನಿನ್ನ ಕೃಪೆಗೊಳಗಾಗುವೆನೆ । ಜಪದಲ್ಲಿ ಮನಸ್ಸೆನ್ನಾಧೀನವಲ್ಲ ॥ ಉಪವಾಸವೇ ಉಚಿತಸಾಧನವೆಂಬೆನೆ । ಉಪವಾಸವೇ ಇರದೆ ಉರಗನು ತಾ ಸರ್ವದಾ ॥ ೨ ॥ ಸನ್ಯಾಸ ಸುಖಸಾಧನವು ಯೆಂತೆಂಬೆನೆ । ಸನ್ಯಾಸಿಯಾಗಿರನೆ ರಾವಣನೂ ॥ ಕನ್ಯಾದಾನವೆ ಮುಖ್ಯಸಾಧನವೆಂಬೆನೆ । ಕನ್ಯಾದಾನವ ಕೊಡನೆ ಕಂಸಗೆ

ಜರಾಸಂಧಾ ॥ ೩ ॥ ಜಾತಿಲಿ ನಿಮ್ಮ ದಯ ಸಂಪಾದಿಸೇನೆಂದರೆ । ಜಾತಿಲಿ ಕಶ್ಯಪಸುತರು ದೈತ್ಯರಾಗಿರರೆ ॥ ಭೂತಿ ನಿಮ್ಮ ದಯ ಸಂಪಾದಿಸೇನೆಂದರೆ । ಭೂತಿಯಾಗಿರನೆ ಈದುರುಳ ದುರ್ಯೋಧನಾ ॥ ೪ ॥ ಬಂಧುತ್ವವೇ ಗತಿಸಾಧನವೆಂಬೆನೆ । ಬಂಧುತ್ವವಿರದೆ ಶಿಶುಪಾಲನಿಗೆ ॥ ಒಂದಲಿಂದುಚಿತ ಕಾಣೆ ಹಯವದನರಾಯನೆ ಎಂದೆಂದಿಗೂ ದಾಸನೆಂದೆನಿಸೊ ॥ ೫ ॥ ಶ್ರೀಃ ॥

## ೧೪೨. ರಾಗ ಕಲ್ಯಾಣಿ, ಅಟತಾಳ.

ಪಾಥೇಯವ ಕಟ್ಟಿರೊ । ವೈಕುಂಠಕ್ಕೆ । ಪಯಣ ಸಮ್ಮತವಾದರೆ ॥ ॥ ಪಲ್ಲ ॥ ಮಾತು ಗೀತೆ ಭಕ್ತಿಯೆಂಬೊ ಚಿತ್ರಾನ್ನವ । ಪಾರ್ಥಸೂತನ ಪಾದಪದ್ಮ ಪತ್ರವ ಹಾಕಿ ॥ ಅನುಪಲ್ಲ ॥ ಹರಿಭಕ್ತಿ ಹರಿಗೋಲಿಂದ । ಮೆಲ್ಲಗೆ ನೀವು । ವಿರಜಾನದಿಯ ದಾಟಿರೊ । ಕರಜಾತದಿಂದ ಹಿರಣ್ಯಕನ ಸೀಳಿದ । ಕುರುಜಾತಸೂತನ ದರುಶನವಾಹೊದೊ ॥ ೧ ॥ ಶುದ್ಧಸಾತ್ವಿಕ ಪುರವೊ । ತಾಮಸರಿಗೆ । ಪೊದ್ದಿಂಬು ಕೊಡಲೊಲ್ಲವೊ ॥ ಅಧ್ಯಾತ್ಮ ಅರ್ಜುನಗೆ ನಿರ್ಧಾರ ಪೇಳಿದ । ತದ್ಧಾಮ ಪರಮಂಮವುವೆಂಬ ಪುರವೊ ॥ ೨ ॥ ಮಧ್ವರಿಗಿದು ಲಭ್ಯವೊ । ಶ್ರೀಹರಿಪುರ । ಬದ್ಧವೀತಗೆ ಸಮೀಪ ॥ ತದ್ವಿಷ್ಣೋಃ ಪರಮಂ ಪದವೆಂತೆಂದೆಂಬೊ । ವಿದ್ವಾಂಸರೆನಿಸುವ ವ್ಯಾಖ್ಯಾತಪದವೋ ॥ ೩ ॥ ಪಾಪಿಷ್ಠಗತಿದೂರವೋ । ಭಕ್ತರಿಗಿದು ಸಮೀಪ ಶ್ರೀಹರಿಪುರವೋ ॥ ತಾಪತ್ರಯಗಳಿಲ್ಲ ಆಪಟ್ಟಣವ ಸೇರೋ । ಆಪತ್ತಿಲ್ಲದ ಪರಮಾನಂದ ಪುರವೊ ॥ ೪ ॥ ಕೂಗಳತೆಗೆ ಕೊಂಚವೋ । ಇದಕ್ಕೆ ನೋಡು । ನಾಗರಾಜನೆ ಸಾಕ್ಷಿಯೋ ॥ ನಾಗಶಯನನನು ನಂಬಿಕೊಂಡಿರಲಾಗಿ । ಹೋಗಬೇಡಿರಿ ಯೆಂದು ಹುಟ್ಟಗೆಡಿಸುವನು ॥ ೫ ॥ ಪ್ರಳಯಧಾಳಿಗಳಿಲ್ಲವೋ । ಇದಕೆ ನೋಡು । ಛಳಿಮಳೆ ಬಿಸಿಲಿಲ್ಲವೋ ॥ ಬೆಳೆಯ ಬಿತ್ತಿಲ್ಲದ ಬೇಕಾದ ಸಂಪತ್ತು । ನಳಿನನಾಭನ ಪುರದೊಳು ಕೊಡುತಿಹನೂ ॥ ೬ ॥ ಪರಿಯೆಂಬ ಮಾತಿಲ್ಲವೋ । ಒಂದು ಕಾಸು । ತೆರಿಗೆಯು ಕೊಡಬೇಡವೋ ॥ ಪರಮ ಕರುಣಿ ಹಯವದನ ವೈಕುಂಠದಿ । ಸರುವ ಮಾನ್ಯವನಿತ್ತು ಶರಣರ ಸಲಹುವಾ ॥ ೭ ॥ ಶ್ರೀಃ ॥

### ೧೪೩. ರಾಗ ಕಲ್ಯಾಣಿ, ಆದಿತಾಳ.

ನಾರಾಯಣ ಎನ್ನಿರೋ । ಸಜ್ಜನರೆಲ್ಲ । ನಾರಾಯಣ ಎನ್ನಿರೋ ॥ ॥ಪಲ್ಲ॥ ಸಾರರಹಿತ ಸಂಸಾರದಲಿ ಪರ । ಸಾರ ಇದು ಎಂದು ಸಂಸಾರಿ ನೀವೆಲ್ಲ ॥ ಅನುಪಲ್ಲ॥ ಇಹಪರ ಸುಖ ಉಂಟೊ । ಇದರ ಫಲ । ಬಹಳ ಕಟ್ಟಿದ ಗಂಟೋ । ಘನವುಹಿಮಗೆ ಇದು । ಮಹಮಹಿಮೆ ಇದಲ್ಲದೆ । ಮಹಿಯೊಳಗಿದು ಮಹಾರಸವಾದಂಥ ಮಂತ್ರ । ಮಹಭಕುತಿಪೂರ್ವಕವಾಗಿ ಒಮ್ಮೆ॥ ೧ ॥ ಹಸಿವೆಯು ಶ್ರಮವಿರಲಿ। ಹಸಿವಿರದೆ। ಹರುಷವು ತಾನಿರಲಿ। ರಸಿಕ ಶ್ರಮ ತೆರಳಿ ಮಾನಸ ವಶವು ಆಗಲಿ ಆಗದಿರಲಿ । ದೋಷವಾಗಲಿ ಶುದ್ಧವಾಗಲಿ। ಶ್ರೀಶನ ಮರಿಯದ ಹಾಂಗೆ॥ ೨ ॥ ಚೋರನು ಎಂದೆನದೆ । ಚಿತ್ತದಲಿ । ಜಾರನೆಂದೆಣಿಸದೆ । ಸ್ಮರಣೆಮಾತ್ರದಿ ಬಹಳ । ಪಾರರಹಿತ ಅನರ್ಥಸಂಚಿತ । ಹರಣೆಮಾಡುವ ಪವನ ಪ್ರಿಯ ಸರ್ವರಂತರ ಹಯವದನ ॥ ೩ ॥ ಶ್ರೀಃ ॥

### ೧೪೪. ರಾಗ ರೇಗುಪ್ತಿ, ಅಟತಾಳ.

ನೀ ಕರುಣದಿಂದ ಪಾಲಿಸದಿದ್ದರೆ ಇನ್ನು । ನಾ ಕಾಣೆ ಮನ್ನಿಸುವರ ॥ ಪಲ್ಲ ॥ ಸಾಕಾರರೂಪ ಸರ್ವೋತ್ತಮ ನೀ ಕಾಯೋ ಪ । ರಾಕುಮಾಡದೆ ಯೆನ್ನನು ದೇವಾ ॥ ಅನುಪಲ್ಲ ॥ ಗುರುಹಿರಿಯರನು ಕಂಡು ತರಳತನದಲಿ ನಾನು । ಚರಣಕೆರಗದೆ ಬರುವೆನೊ । ವರ ಸಕಲ ಸಂಪದವು ಬೇಡಿ ಬಯಸುತ ನಿನ್ನ ಸ್ಮರಣೆಯನು ಮರತಿದ್ದೆನೊ ॥ ಸ್ಮರನ ಬಾಣಕೆ ಸಿಲ್ಕಿ ಪರಸತಿಗೆ ಒಳಗಾಗಿ ದುರ್ಗತಿಗೆ ನೆಲೆಯಾದೆನೊ । ಶಿರಿಯರಸನೆ ನಿನ್ನ ಚರಣವನು ನಂಬಿದೆನೊ ಕಡೆಹಾಯಿಸೊ ಯೆನ್ನನು ದೇವಾ ॥ ೧ ॥ ಆರುಮಂದಿಗಳೆಂಬ ಕ್ರೂರವೈರಿಗಳಿಂದ । ಗಾಢಾದೆನವರ ದೆಸೆಗೆ ॥ ಮಾರಿಹಬ್ಬದ ಕುರಿಯು ತೋರಣವ ಮೆಲುವಂತೆ ತೋರುತಿದೆ ಯೆನ್ನ ಮತಿಗೆ ॥ ಘೋರಸಂಸಾರವೆಂಬೊ ವಾರಿಧಿಯು ದಾಟಿಸುವ । ಸಾರುತಿದೆ ಬಿರುದು ನಿನಗೆ । ಮಾರನಯ್ಯ ನಿನ್ನ ಚರಣವ ನಂಬಿದೆನು ಕಡೆಹಾಯಿಸೊ ಯೆನ್ನನು ದೇವಾ ॥ ೨ ॥ ಹಲವು ಜನ್ಮಗಳಲ್ಲಿ ಬಲುನೊಂದು ಬಾಯಾರಿ । ಬಳಬಳನೆ ತಿರುಗುತಿಹೆನೊ ॥ ಸಲೆ ಉದರ

ಪ್ರೋಷಣಕೆ ತಲೆ ತುಳಸಿ ನಾಯುಂತೆ ಮನೆಮನೆ ತಿರುಗುತಿಹೆನೊ ॥ ಜಲಧಿ ಮೇಲಿನ ಗುಳ್ಳೆಯೆನುತಿಪ್ಪ ಈದೇಹ ಸ್ಥಿರವೆಂದು ಮೆಚ್ಚುತಿಹೆನೊ । ಜಲಜನಾಭನೆ ನಿನ್ನ ಮಹಿಮೆಯನು ಪೊಗಳುವ ಚೆಲುವ ಶ್ರೀಹಯವದನದೇವಾ ॥ ೩ ॥ ಶ್ರೀ ॥

೧೪೫. ರಾಗ ದೇಶಿ, ಝಂಪೆತಾಳ.

ಹರಿನಾರಾಯಣ ನಾರಾಯಣನಾಮಕ್ಕೆ ಜಯ ॥ ಪಲ್ಲ ॥ ನಾರಾಯಣ ನಾರದಪ್ರಿಯ । ನಾರಾಯಣ ನರಕಾಂತಕ । ನಾರಾಯಣ ನಳಿನೋದರ ॥ ಅನುಪಲ್ಲ ॥ ಸುರಪಂಜಯ ಸುಖಕಾರಣ ದಿತಿಜಾಂತಕ ದೀನಶರಣ ॥ ಮರುತಪ್ರಿಯ ಪಾಂಡವಪ್ರಿಯ ಪರಿಪೂರ್ಣ ಪರಮಜಯ ॥ ॥ ೧ ॥ ಅಘಕುಲ ದಾವಾನಲ ಅತಿಸದ್ಗುಣಗಣ ನಿರ್ಮಲ । ತ್ರಿಗುಣಾತೀತ ತ್ರಿದಿಶೇಶ್ವರವಂದಿತ ಜಯ ॥ ೨ ॥ ಅತಿಮೋಹನ ಚರಿತ ನಮೋ ಅತಿಸದ್ಗುಣಭರಿತ ನಮೋ ॥ ಹತರಿಪು ಪೂರ್ಣಂ ಜಯ ಗತ ಕಲ್ಮಷ ಹಯವದನ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೪೬. ರಾಗ ರೇಗುಪ್ತಿ, ಅಟತಾಳ.

ದೇವರ ದೇವ ಶ್ರೀನಾರಾಯಣನಿಗೆ ಪೂಜೆಯ ಮಾಡಿರೊ ॥ ಪಲ್ಲ ॥ ಮೇಲೆ । ಕೈವಲ್ಯ ಸುಖವೀವ ಕರುಣಾಕರನಿಗೆ ಪೂಜೆಯ ಮಾಡಿರೊ ॥ ॥ ಅನುಪಲ್ಲ ॥ ಪರದೇವತೆಗೆರಗಿ ಗುರು ಮೊದಲಾದವರ । ಪೂಜೆಯ ಮಾಡಿರೊ ॥ ಅಲ್ಲಿ । ಗರುಡ ವೇದವ್ಯಾಸ ದುರ್ಗಾದಿ ದೇವರ ಪೂಜೆಯ ಮಾಡಿರೊ ॥ ೧ ॥ ಪುರುಷಶಕ್ತಿ ಕೂರ್ಮಾನಂತರ ಚಿಂತಿಸಿ ಪೂಜೆಯ ಮಾಡಿರೊ ॥ ಅಲ್ಲಿ । ಧರಣಿ ಕ್ಷೀರಾಂಬುಧಿ ಶ್ವೇತದ್ವೀಪಂಗಳ ॥ ಪೂಜೆ ॥ ೨ ॥ ದಿವ್ಯ ರತ್ನಮಂಟಪದ ಮಧ್ಯದ ಮೇಲೆ ॥ ಪೂಜೆ ॥ ಅಲ್ಲಿ । ಹವ್ಯವಾಹನನ ಮಂಡಲ ನವಶಕ್ತಿಗೆ ॥ ಪೂಜೆ ॥ ೩ ॥ ದರುವೀಕರೇಂದ್ರನ ಯೋಗ ಪೀಠದ ಮೇಲೆ ॥ ಪೂಜೆ । ಅಲ್ಲಿ । ಪರದೈವ ಶ್ರೀಹರಿಯ ಹೃದಯದಿಂದ್ಯೊದು ॥ ಪೂಜೆ ॥ ೪ ॥ ಅಷ್ಟ ದಳದೊಳಷ್ಟ ಮೂರುತಿಗಳ ನೆನೆದು ॥ ಪೂಜೆ ॥ ಮನ ।

ಮುಟ್ಟಿ ತಾದೀಯ ಮೊಗದನಾ ಸುಮಂದಾದ ॥ ಪೂಜೆ ॥ ೫ ॥ ಇಷ್ಟದೇವತೆ
ಗೆರಗಿ ಗುರು ಮೊದಲಾದವರ ॥ ಪೂಜೆ ॥ ಮನ । ಮುಟ್ಟಿ ಭಜಿಸಿ ನಮ್ರ
ಕರದವ ಕಂಗಳೊಳಿಟ್ಟು ॥ ಪೂಜೆ ॥ ೬ ॥ ಅರ್ಘ್ಯಪಾದ್ಯಾಚಮನ ಮೊದ
ಲಾದುಪಚಾರದಿ ॥ ಪೂಜೆ ॥ ಗಂಗೆ । ಅಗ್ರೋದಕದಿ ಮಜ್ಜನಮಾಡಿಸಿ ವಸ್ತ್ರ
ಕೊಟ್ಟು ॥ ಪೂಜೆ ॥ ೭ ॥ ಸದ್ಗತಿವೀವಂಗನರ್ಘ್ಯಭೂಷಣವಿತ್ತು ॥ ಪೂಜೆ ॥
ಪುನ । ಒಗ್ಗುವಂತೆ ಪರಿಮಳಿಸುವ ಗಂಧಾದಿ ॥ ಪೂಜೆ ॥ ೮ ॥ ಮುಳ್ಳಿಮಲ್ಲಿಗೆ
ಶ್ರೀತುಲಸಿ ಮಂಜರಿಯಿಂದ ॥ ಪೂಜೆ ॥ ನೆರೆ । ಬಲ್ಲರಿಂದ ಪೂಜಾವಿಧಾನವ
ಕೇಳಿ ॥ ಪೂಜೆ ॥ ೯ ॥ ಶೇಷ ಬೊಮ್ಮ ವಾಯು ಈಶ ಗರುಡಾದಿಗೆ ॥ ಪೂಜೆ ॥
ದೇ । ವೇಶ ವಹ್ನಿ ಯಮ ನೈಋತಿ ವರುಣಾದಿಗಳ ॥ ಪೂಜೆ ॥ ೧೦ ॥ ಶ್ರೀಪ
ಮೀರ ಸೋಮೇಶನಂತ ವಿಧಿಗಳ ॥ ಪೂಜೆ ॥ ಲಕ್ಷ್ಮಿ । ಭೂಮಿಹಿತಂಗೆ
ಈಪರಿಯುಲಿಯುಂಗ ॥ ಪೂಜೆ ॥ ೧೧ ॥ ಒಪ್ಪುವ ಧೂಪ ದೀಪಂಗಳನ
ರ್ಪಿಸಿ ॥ ಪೂಜೆ ॥ ಹೆತ್ತ । ತುಪ್ಪವೆರಸಿದ ಪಾಯಸ ಭಕ್ಷ್ಯಭೋಜ್ಯಾದಿ ॥
ಪೂಜೆ ॥ ೧೨ ॥ ಕರ್ಪೂರವೀಳ್ಯವನಿತ್ತು ಕಾಮಪಿತನಿಗೆ ॥ ಪೂಜೆ ॥ ಅಪಾ
ರಮಹಿಮನ ಶೇಷಾದಿ ದೇವನ ॥ ಪೂಜೆ ॥ ೧೩ ॥ ಬಗೆಬಗೆಯಲಿ ಮಾಡ್ದ
ಮಂಗಳಾರತಿಯಿಂದ ॥ ಪೂಜೆ ॥ ಒಳ್ಳೆ । ಸೊಗಸವಾದಿತ್ರ ಗೀತಗಳಿಂದ ॥
ಪೂಜೆ ॥ ೧೪ ॥ ನಿಗಮ ಚರ್ಚಿತನಿಗೆ ಛತ್ರಚಾಮರದಿಂದ ॥ ಪೂಜೆ ॥
ನಸು । ನಗೆಮುಖದ ಹಯವದನ ರಾಯನಿಗಿಂಥ ॥ ಪೂಜೆ ॥ ೧೫ ॥
ಹರಿಯ ಶೇಷದಿಂದ ಪರಿವಾರ ದೇವರ ॥ ಪೂಜೆ ॥ ಮೂಲ । ಗುರುಗಳ
ನಾಮಗಳಿಂದ ಅರ್ಘ್ಯಪಾದ್ಯಗಳಿಂದ ॥ ಪೂಜೆ ॥ ೧೬ ॥ ಕ್ರುದ್ಧೋಲ್ಕ
ಮೊದಲಾದ ಪಂಚರೂಪಗಳಿಂದ ॥ ಪೂಜೆ ॥ ಅರ । ಮರ್ದನ ಮತ್ಸ್ಯಾದಿ
ರೂಪಗಳಿಂದ ॥ ಪೂಜೆ ॥ ೧೭ ॥ ಹೃದ್ಯಕೇಶವ ದ್ವಾದಶರೂಪಂಗಳ ॥
ಪೂಜೆ ॥ ಸುಪ್ರ । ಸಿದ್ಧ ವಾಸುದೇವಾದಿ ರೂಪ ಚತುಷ್ಟಯ ॥ ಪೂಜೆ ॥
॥ ೧೮ ॥ ಎತ್ತ ಪೂಜೆಯೊಳು ತಪ್ಪ ಕಳೆಯಬೇಕೆಂದು ॥ ಪೂಜೆ ॥ ಭಕ್ತಿಯಿಂದಲಿ
ನಮಸ್ಕರಿಸಿ ದೇವೇಶಗೆ ॥ ಪೂಜೆ ॥ ೧೯ ॥ ಸುತ್ತ ಪ್ರದಕ್ಷಿಣೆಗಳ ಮಾಡಿ ಸಮ
ರ್ಪಿಸಿ ॥ ಪೂಜೆ ॥ ಎನ್ನ । ಚಿತ್ತ ನಿನ್ನತ್ತಲೆ ಚರಿಸಲೆಂದು ॥ ಪೂಜೆ ॥ ೨೦ ॥
ತಾಪತ್ರಯಂಗಳ ತಪ್ಪಿಸಿಕೊಡುವಂಗೆ ॥ ಪೂಜೆ ॥ ನಮ್ರ । ಪಾಪಂಗ

ಳಟ್ಟುವ ಪರಮ ಪುರುಷನಿಗೆ ॥ ಪೂಜೆ ॥ ೨೧ ॥ ಕಪಟಜನರ ಕಪಟಕೊಳಗಾಗದೆ । ಪೂಜೆ ॥ ನಿ । ಲೇಪ ಶ್ರೀಹರಿಯು ತ್ರಿಸಂಧ್ಯಕಾಲದಿ ॥ ಪೂಜೆ ॥ ೨೨ ॥ ಮೇದಿನಿಯೊಳು ಸುಪ್ರಸಿದ್ಧ ಮಹಿಮನಿಗೆ ॥ ಪೂಜೆ ॥ ನಮ್ಮ । ಅಧಿವ್ಯಾಧಿಗಳಟ್ಟಿ ಮೇಧಾವ ಈವಂಗೆ ॥ ಪೂ ॥ ೨೩ ॥ ಗಂಗೆಯ ತಡಿಯಿಂದ ಬಂದ ತ್ರಿವಿಕ್ರಮನಿಗೆ ॥ ಪೂಜೆ ॥ ಅಲ್ಲಿ । ಭಂಗವಿಲ್ಲದೆ ಪೂಜೆಯ ಕೈಕೊಂಡವನಿಗೆ ॥ ಪೂಜೆ ॥ ೨೪ ॥ ಇಂಗಿತವರಿತು ಕಾಮರಾದಿ ಈವಂಗೆ ॥ ಪೂಜೆ ॥ ಉ । ತ್ತುಂಗ ಭೂಷಣ ನೈವೇದ್ಯಂಗಳನುದಿನ ॥ ಪೂಜೆ ॥ ೨೫ ॥ ಯಸ್ಯಸ್ಮೃತ್ಯಾಚನಾಮೋಕ್ತ್ಯಾ ಮಂತ್ರಗಳಿಂದ ॥ ಪೂಜೆ ॥ ರ । ಹಸ್ಯ ವಾದಿರಾಜನಂಥ ಗುರುವ ಕೇಳಿ ॥ ಪೂಜೆ ॥ ೨೬ ॥ ಐಶ್ವರ್ಯ ಅನೈಶ್ವರ್ಯ ಸ್ಥಿರವೆಂದು ನೆಚ್ಚದೆ ॥ ಪೂಜೆ ॥ ಆ । ಲಸ್ಯ ಹಸಿವು ತೃಷೆ ಬಿಟ್ಟು ಹರುಷದಿ ಪೂಜೆ ॥ ೨೭ ॥ ವೇದವ ತಂದ ಹಯವದನದೇವಗೆ ॥ ಪೂಜೆ ॥ ನಮ್ಮ । ವಾದಿರಾಜಗೆ ಸುಪ್ರಬೋಧವೀವಂಗೆ ॥ ಪೂಜೆಯ ಮಾಡಿರೋ ॥ ೨೮ ॥ ಶ್ರೀ ॥

## ೧೪೭. ರಾಗ ನಾಟಿ, ಝಂಪೆತಾಳ.

ಮನ್ನಿಸೋ ನೀಯೆನ್ನ ಮಧ್ವಮುನಿರಾಯ । ಚೆನ್ನಿಗ ಶ್ರೀಹರಿ ಚರಣ ಸೇವಕನೇ ॥ ಪಲ್ಲ ॥ ಅಂಜನೆಯ ಗರ್ಭ ಪರಿಪೂರ್ಣ ಚಂದ್ರಮನೆ । ಕಂಜಪ್ರಿಯ ಸುತನಿಗೆ ಕಲ್ಪತರು ನೀನೆ । ರಂಜಿಸುವ ಶ್ರೀರಾಮಚಂದ್ರ ಸೇವಕನೆ । ಸಂಜೀವನ ಗಿರಿಯ ತಂದ ಮಹಾತ್ಮಕನೆ ॥ ೧ ॥ ಅರ್ಜುನಗೆ ಅಣ್ಣನಾಗಿ ಅಮಿತ ದಿಕ್ಕೆಲ್ಲವನು । ಲಜ್ಜೆಯನು ಕೆಡಿಸಿ ಪಡುವ ಧೀಕರನು ಜರಿದೇ ॥ ಮೂಜಗವು ಮೆಚ್ಚಲು ಮಗಧನ ಸೀಳಿದೆ । ಸಜ್ಜನಪ್ರಿಯ ಭೀಮಸೇನಾ ಉದಾರಾ ॥ ೨ ॥ ನೂರಾರು ಎರಡೊಂದು ಮೂಢಮತಗಳ ಜರಿದು । ಸಾರ ಮಧ್ವಶಾಸ್ತ್ರ ಸಜ್ಜನರಿಗೊರೆದೆ ॥ ಧೀರ ಶ್ರೀಹಯವದನ ಕೂರ್ಮ ಸೇವಕನಾದ ಧೀರ ಮಧ್ವಾಚಾರ್ಯ ದೇಶದೊಳು ಮೆರದೇ ॥ ೩ ॥

## ೧೪೮. ರಾಗ ಶಂಕರಾಭರಣ, ಆದಿತಾಳ. (ಉರಟಣೆ)

ಲಕ್ಷ್ಮೀರಮಣಗೆ ಮಾಡಿದ ಉರಟಾಣೆ ॥ ಪಲ್ಲ ॥ ಇಳೆಯೊಳಗತಿ ಜಾಣೆ ಸುಂದರವೇಣಿ ॥ ಅನುಪಲ್ಲ ॥ ಮಚ್ಛಕಚ್ಛಪ ಕಿರಿಯು ಕೇಸರಿ

ಯುಂದದಿ ಮುಖನೆ ಮುಖ ತೋರೆನಗೆ ನಾಥ ಕುಂಕುಮ ಹಚ್ಚುವೆನೊ ॥ ೧ ॥ ಬಲಿಯ ದಾನವ ಬೇಡಿ ಇಳೆಯ ಓರಡಿಮಾಡಿ । ಅಳದಡಿಗಳ ತೋರ್ರೈ ಅರಸಿನ ಹಚ್ಚುವೆನೊ ॥ ೨ ॥ ಧರಣಿಪಾಲರ ಗೆದ್ದ ಗರುವಿಗಳನು ಕೊಂದ ಪರಶುರಾಮ ನಿನಗೆ ಗಂಧವ ಹಚ್ಚುವೆನೋ ॥ ೩ ॥ ದಶರಥನಲಿ ಜನಿಸಿ ದಶಮುಖನ ಸಂಹರಿಸಿ । ಶಶಿವದನೆಯ ತಂದ ಶಶಿಧರವಂದ್ಯಾ ॥ ೪ ॥ ಹದಿನಾರು ಸಾಸಿರ ಸುದತಿಯರ ಆಳಿದ । ಪದುಮಕರವ ತೋರೊ ಕಡಗ ಹಾಕುವೆನೊ ॥ ೫ ॥ ವಸನರಹಿತನಾಗಿ ವಸುಧೇಲಿ ತಿರಿಗಿದನೆ । ಬಿಸಜನಾಭ ನಿನಗೆ ವಸನಾ ಉಡಿಸುವೆನೊ ॥ ೬ ॥ ವರತುರಗವನೇರಿ ಕಲಿಯ ಸಂಹರಿಸುವಿ । ಸಿರಿಹಯವದನನೆ ಹಾರವ ಹಾಕುವೆನೊ ॥ ೭ ॥ ಶ್ರೀಃ ॥

೧೪೯. ರಾಗ ಆನಂದಭೈರವಿ, ಅಟತಾಳ.

ಫಲಹಾರವ ಮಾಡೊ ಪರಮ ಪುರುಷನೆ ॥ ಪಲ್ಲ ॥ ಜಲಜಾಕ್ಷಿ ಲಕುಮಿಯ ಕರಕಂಜದಿಂದ ॥ ಅನುಪಲ್ಲ ॥ ಕದಳಿ ಕಾಮಾರಿ ಖರ್ಜೂರ ಕಿತ್ತಳೆ। ಬದರಿ ಹಲಸು ಮಾವು ದ್ರಾಕ್ಷಿಗಳು ॥ ಮಧುರವಾದ ಮಾದಳ ತೆಂಗಿನಕಾಯಿ । ಮೊದಲಾದ ಪರಿಪರಿ ಸುಫಲಂಗಳು ॥ ೧ ॥ ಉತ್ತುತ್ತೆ ಜೇನು ಅಂಜೂರ ಶೇಪು । ಮತ್ತೆ ದಾಳಿಂಬ ನಿಂಬೆ ಜಂಬುಗಳು ॥ ಕತ್ತರಿಸಿದ ಕಬ್ಬು ಬಾದಾಮಿ ಬುಗರಿಯು। ಅತ್ತಿ ಪನ್ನೇರಳೆ ನೆನೆಗಡಲೆಯು॥ ॥ ೨ ॥ ಹಾಲು ಸಕ್ಕರೆ ಬೆಣ್ಣೆ ತುಪ್ಪ ಸೀಕರಣೆಯು । ಸಾಲುರಸಾಯನ ಎಳೆನೀರುಗಳು । ಮೂರುಲೋಕದೊಡೆಯ ಹಯವದನ ವೆಂಕಟರಾಯ ಪಾಲಿಸು ಶ್ರೀವರ ಕರಕಂಜದಿಂದ ॥ ೩ ॥ ಶ್ರೀಃ ॥

೧೫೦. ರಾಗ ಪೂರ್ವಿ, ಆದಿತಾಳ.

ಬಣ್ಣಿಸಲಳವೆ ನಾನು । ಬಣ್ಣಿಸಲಳವೆ ನಾ ಬಹುವೇಷವುಳ್ಳವಾ । ವಣ್ಣದ ಕಣಿಯಾದ ಉಡುಪಿನ ಕೃಷ್ಣನ್ನ ॥ ಪಲ್ಲ ॥ ಕರಗುವ ಮಿಸುಣಿಯ ಕಾಂತಿಯಿಂ ಗರುಡನ ಗರಿಗಳ ಇರವ ಧಿಕ್ಕರಿಪ ಪೀತಾಂಬರ । ಎರಡು ಪಾರ್ಶ್ವಗಳಲ್ಲಿ ಶಿರದ ಕಿರೀಟವು । ಕೊರಳ ಹಾರದ

ಜೋಡು ಇರಲು ಈಷರಿಯಿಂದ । ಮೆರೆಯುಲಬ್ಜದ ಕಂಕಣ ಭೂಷಾಗೈದುವ । ವರಸೂರ್ಯನಾರಾಯಣ ಬಾಹುಗಳುಳ್ಳ । ಮಕರಕುಂಡಲ ಬಾಹುಪುರಿಗಳಿಂದೆಸವನಾ (‡) ॥ ೧ ॥ ಅಳಿಗಳ ಕೂಟದಿ ಪೊಳೆವ ನೆತ್ತಿಯ ಗೊಂಡೆ । ಎಳೆಯ ಮುತ್ತಿನಸರ ದುಂಡುರತ್ನಮಣಿ । ಗಳ ಕೂಟ ಪೊಳೆಯಲು ಕೆಂಪುವಗಲೆಯಿಂದ । ಕೆಳಗಾಗಲರುಣನ ಗರಿಷಾದಕಂಪೆಯ । ಗಲಿ ಇಂದ್ರ ನೀಲದದಾಳ ದಿಕ್ಕುಗಳನೆ । ಬೆಳಗುತಲೆ ಬಹಳಾ ಲೀಲೆಯ ತೋರ್ಪ । ಖಳರೆದೆ ಶೂಲನ ಚೆಲುವ ಗೋಪಾಲನ (§) ॥ ೨ ॥ ಜಾತಿಮುತ್ತಿನ ಚುಂಗು ಖ್ಯಾತಿಯಿಂದೊಪ್ಪುವ । ಚಾತುರ್ಯದಿ ವಾರಿಗೊಂಡೆಯ ಕಟ್ಟಿ । ಆಜಾತದಿಂದಲಿ ಅತಿವ್ಯೆಜೋಡು ತೊಟ್ಟು ಈ । ರೀತಿಯಿಂದೆಡೆಗೈಯ ವಂಕಿ ಮಧ್ಯದೊಳಾನು । ಚ್ಯುತ ಖಡ್ಗದಿಂದೊಪ್ಪುವ । ಭೂತಳದಿ ವಿಖ್ಯಾತಿ ಹೊಡದು ಮೆರವ ದುಷ್ಟಮೃಗವ । ಘಾತಿಸಿ ಬಿಡುವ ಕಿರಾತ ಸ್ವರೂಪನ್ನ (†) ॥ ೩ ॥ ಮಿಸುಣಿಯ ಮುಂಡಾಸು ಪೊಸರವಿಯುಂತಿರೆ । ಶಶಿಯ ಪ್ರಭೆಯಂತೆ ಪಸರಿಸಲಂಗಿಯು । ಹಸನಾದ ನವರುಂಡು । ವಶದಲ್ಲಿ ತುಂಬಿರೆ ಕುಸುಮನಂದದಿ ಧೋತ್ರದಿ ವುಟ್ಟು ವೈ । ವರ್ಣನವ ಸುತ್ತಿ ಗಾತ್ರದಿ ಕುಲಾಯಿ ಒಪ್ಪಿ । ನಸುನಗೆಯಿಂದೊಪ್ಪುವ ನವವಿಕ್ರ ವೇಷನ್ನ (×) ॥ ೪ ॥ ಕಡವ ಬೊಗರಿಯಂತೆ ಕಡದು ಮಾಡಿದ ಬಾಹು । ದೃಢವಾದ ಕುಚಗಳು ದುರಿತದುನ್ನತವಾದ । ಒಡನಡು ಬಳುಕಲು ಕಡೆಗಣ್ಣ ನೋಟದಿ । ಮೃಡ ಮುಖ್ಯರ್ಮೋಹಿಸಿ ಒಡಲ ಮಾರದಿರಲು । ಮುಡಿಯ ನೋಡುತ ನವಿಲು ನಾಚೀ ಮೊಗ । ಒಡವಡವಿಯ ಸೇರಲೂ ಭೂಷಣಗಳು । ಜಡಿವುತ್ತ ಜಗದೊಳು ಕಡುಮೋಹಿನೀ ಬಲು (*) ॥ ೫ ॥ ಶಂಕೆ ಇಲ್ಲದ ಕರ್ಮ ಕಿಂಕರರೊಳಗಾಗಿ । ಟೊಂಕದಿ ಕೈಯಿಟ್ಟು ಶಂಕಿಸಲು ತನ್ನಂಘ್ರಿ । ಪಂಕಜಂಗಳ ಬೇಡಿ ಪುರುಷಾರ್ಥ ಪಡೆಯಿರೊ । ಶಂಕೆ ಬೇಡನ್ನೋ ಯೆಂದು ಲಂಕರಿಗೆ ಸೂಸಿಪ್ಪ ।

(‡) ಉಡುಪಿ ಶ್ರೀಕೃಷ್ಣನ ಆದಿತ್ಯವಾರದ ಅಲಂಕಾರ. (§) ಸೋಮವಾರ ರಾಜಗೋಪಾಲ. (†) ಮಂಗಳವಾರ ಕಿರಾತನ ಅಲಂಕಾರ. (×) ಬುಧ ಗುರು ವಾರಗಳಲ್ಲಿ ಬ್ರಾಹ್ಮಣಾಲಂಕಾರ. (*) ಶುಕ್ರವಾರ ಮೋಹಿನೀ.

ಸಂಖ್ಯಾತ ಕರಯುಗಳದಿಂದೊಪ್ಪುವ । ಶಂಖ ಚಕ್ರ ಆಯುಧಂಗಳ ಪಿಡಿದು ಸರ್ವಾಲಂಕಾರದಿಂ ವೆಂಕಟೇಶನ ರೂಪಾ (+) ॥ ೬ ॥ ಈವಿಧ ತಪ್ಪದೆ ಯೇಳು ವಾರಗಳಲ್ಲಿ । ಪಾವನಮತ ಗುರು ಬಳಿಗೆ ಬಂದವರೆಲ್ಲ। ಶ್ರೀವರ ಹಯವದನ ಸೇವೆಗೊಳ್ಳಿರೊ ನಿತ್ಯ । ಆವಾವ ನಾಡಿನ ಆಶ್ರಿತ ಜನರನ್ನು । ಭಾವಶುದ್ಧಗಳಂತು ಕೋರಿಕೆಗಳ। ಈವ ಭಕ್ತರಿಗೊಲಿದು ಪಾಷಂಡಾದಿ। ಶ್ರೀವರ ತರಿದ ಸದ್ವೈಷ್ಣವರ ದೇವನ್ನ॥ ೭ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೫೧. ರಾಗ ತೋಡಿ, ತ್ರಿಪುಟತಾಳ.

ಭಳಿರೆ ಭಳಿರೆ ನಿನ್ನ ಗುಣಗಳ ಸ್ತುತಿಸುವೆ । ಜಲಧಿ ಸಮ ಗಾಂಭೀರ್ಯ ಜಯತೀರ್ಥವರ್ಯ ॥ ಪಲ್ಲ ॥ ಆವಾವ ಪರಿಯಲಿ ಹಯಗ್ರೀವ ಮೂರ್ತಿಯ ಪದವ । ತವಕದಿ ಚಿಂತಿಪ ವರಚಿಂತಾಮಣಿಯೆ । ಪಾವನ ಗುರು ಶ್ರೀಮದಾನಂದತೀರ್ಥಾರ್ಯರ ಭಾವಗಳನೆ ಪೇಳಿ ಕಾವ ಸುಜನರನ್ನು ॥ ೧ ॥ ಮಧ್ವರಾಯರೆ ಬಂದು ನಿನ್ನೊಳಗೆ ನಿಂದು । ಬೋಧಮಯ ಸಿದ್ಧಾಂತಮತವನುದ್ಧರಿಸಿದ್ಯೊ । ಅದ್ವೈತ ಮಾಯಿಗಳ ಭೇದಿಸೀ ಜರಿವಂಥ । ಉದ್ಯೋಗದಲ್ಲಿದ್ದು ಉದ್ಧಾರ ಮಾಡಿದ್ಯೊ ॥ ೨ ॥ ನಿನ್ನ ಕೃತಿಯೊಳಂಜನವ ದೃಷ್ಟಿಯೊಳಿಟ್ಟು । ಸನ್ಯಾಯ ವಿವೃತ್ತಿ ಮತ ಭೇದಗಳಲ್ಲಿ । ಪನ್ನಂಗಶಯನನ ಭಕ್ತಿ ಜನರಿಗೆ ಪ್ರ। ಸನ್ನವನೆ ಮಾಡಿ ಪುರುಷಾರ್ಥಗಳನಿತ್ತ್ಯೋ॥ ೩ ॥ ಬುಧರು ನಿಮ್ಮಯ ನ್ಯಾಯ ಸುಧಾ ಶ್ರವಣವ ಸವಿದು। ಉದ್ಧರಿಸಿ ಮೋಹಂಗಳ ವದ್ದು ಜರಿದು ನಿನ್ನ। ಪದ್ಧತಿಯ ತಿಳಿದು ಮುದ್ದು ಕೃಷ್ಣನ ಪದವ । ಬದ್ಧದಿಂದೈದಿಸುವೆ ಪ್ರಸಿದ್ಧವಾದ ಗುರುವೆ ॥ ೪ ॥ ಬರಿಯ ಮಾತುಗಳಿಂದ ಬಂದಾ ವಿದ್ಯಾರಣ್ಯನ । ಮರುಳುಮಾಡಿದ ಗ್ರಂಥ ಕರುಣದಿಂದಾ। ನರರ ನರಗಳ ಮಾಡಿದ ಆಶ್ಚರ್ಯಕಾರಣ । ಪುರುಷ ಶ್ರೀಹಯವದನನ ಪಾದಸರಸಿಜ ಭ್ರಮರ ॥ ೫ ॥

(+) ಶನಿವಾರ ಶ್ರೀನಿವಾಸ.

## ೧೫೨. ರಾಗ ಪಂತುವರಾಳಿ, ರೂಪಕತಾಳ.

ಹಮ್ಮನಳಿದು ನಮ್ಮ ಮತವ । ನೆಮ್ಮ ಜಯ ಮುನೀಂದ್ರ ಕೃತಿಯು । ರಮ್ಯರಸವ ಸವಿದು ಸವಿದು । ನಿಮ್ಮ ದುರ್ಮತಗಳನೆ ಬಿಡಿರೋ ॥ ॥ ಪಲ್ಲ ॥ ಸುಖಮುನಿ ಚತುರ್ಮುಖರು ಕುಮತ । ನಿಕರವ ನೋಡಿ ಮನಕೆ ತಂದು ॥ ಸುಕೃತಿಯೆಂಬ ಶ್ರೌತ ಜಲದ ಕೃಷ್ಣನ ಪಾದ ತೊಳೆಯಲು । ಭಕುತಿ ಭರದಿ ಗಿರೀಶ ಮುಖ್ಯ । ಸಕಲ ಸುರರು ಶಿರದ ಮೇಲೆ । ಲಕುಮಿ ಆತ್ಮಕರಾಗಿ ಧರಿಸಿ । ಸುಖಿಸಿದ ಕಥೆ ಸ್ಮೃತಿಯೊಳಿರಲು ॥ ೧ ॥ ಆಗ ಭಗೀರಥನ ತೆರದಿ । ಯೋಗಿ ಜಯಮುನೀಂದ್ರ ಕೃಪಾ । ಸಾಗರನಾಗಿ ಧರೆಗೆ ಬಂದು । ಈಗುರುಕೃತಿ ಗಂಗೆಯಾ । ಬೇಗ ತಾನು ತುತಿಸಿ ವ್ಯೆಯು । ಯಾಗಗೊಳಿಸಿ ಸಹಸ್ರ ಮುಖದಿ । ಭಾಗವತರೆಂಬ ಬುಧರಿಗಿತ್ತ । ಭಾಗ್ಯವ ನೀವೆಲ್ಲ ನೋಡಿರೋ ॥ ೨ ॥ ಶ್ರುತಿವಃಯವಾದ ಬಹಳ ಬಲುಯು । ಕುತಿಯನೆ ನಳವಳಿಸಿ ಸು । ಮತಿಯೆಂಬ ಮಂದರ ಹೂಡಿ । ಮಃಥಿಸಿ ಮಧ್ವಮತಾಬ್ಧಿಯಾ । ಯತಿಶಿರೋಮಣಿ ಜಯಮುನಿ ಶ್ರೀ । ಪತಿ ಹಯವದನ್ನ ಬಲದಿ । ಪ್ರುತಿಯಮೃತವ ರಚಿಸಿದ ನಮ್ಮ ಕ್ಷಿತಿಸುರರೆ ಕುಡಿದು ನೋಡಿರೋ ॥ ೩ ॥ ಶ್ರೀಃ ॥

# ಬಿರುದಿನ ಸುವ್ವಾಲಿಪದ.

## ೧೫೩. ರಾಗ ತೋಡಿ, ಆದಿತಾಳ.

ಸುವ್ವಿ ಸುವ್ವಿ ನಮ್ಮ ಶ್ರೀರಮಣಗೆ ಸುವ್ವಿ । ಸುವ್ವಿ ಸುವ್ವಿ ನಮ್ಮ ಭೂರಮಣಗೆ ಸುವ್ವಿ ॥ ಸುವ್ವಿಯೆಂದು ಪಾಡಿ ಸಜ್ಜನರೆಲ್ಲ ಕೇಳಿ ॥ ಪಲ್ಲ ॥ ಹರಿಗೆ ಶರಣೆಂಬೆ ನಾ ಶಿರಿಗೆ ಶರಣೆಂಬೆ । ವರವಾಣಿ ರಮಣಗೆ ಶರಣೆಂಬೆ ಸುವ್ವಿ । ವರವಾಣಿ ರಮಣಗೆ ಶರಣೆಂದು ಪೇಳಿದ ಗುರುವಾದಿರಾಜೇಂದ್ರನ ಕೃತಿಯೆಂದು ಸುವ್ವಿ ॥ ೧ ॥ ಪಕ್ಷಿವಾಹನ್ನ ಜಗಕೆ ಮೋಹನ್ನ ರಕ್ಕಸರನ್ನ ದಾಹನ್ನನೀವ ಸುವ್ವಿ । ರಕ್ಕಸರನ್ನ ದಾಹನ್ನನೀವ । ತನ್ನ ಮರೆಹೊಕ್ಕರ ಚೆನ್ನಪ್ರಸನ್ನ ಕಾವ ಸುವ್ವಿ ॥ ೨ ॥ ಯಶೋದೆಯ ಕಂದ ತನ್ನ ವಿಷವನುಣ್ಣೆಂದ ಕರ್ಕಶದ ಪೂತನೆಯ ಶಿಶುವಾಗಿ ಸುವ್ವಿ ॥ ಕರ್ಕಶದ

ಪೂತನೆಯ ಶಿಶುವಾಗಿ ಕೊಂದ ನಮ್ಮ ಎಸವ ಗೋವಿಂದ ಪಾಲಿಸ ಬಂದ ಸುವ್ವಿ ॥ ೩ ॥ ಶಕಟಾಸುರನ್ನ ಮೆಟ್ಟಿ ಕೊಂದ ಬಲು । ವಿಕಟ ಪಾವಕನ್ನ ಕೊರಳೊತ್ತಿ ಕೊಂದ ಸುವ್ವಿ । ವಿಕಟ ಪಾವಕನ್ನ ಕೊರಳೊತ್ತಿ ಕೊಂದು ಸರ್ಪನ ಮಸ್ತಕದ ಮೇಲೆ ನಲಿವುತ ನಿಂದು ಸುವ್ವಿ ॥ ॥ ೪ ॥ ಕರುಗಳ ಕಣ್ಣಿಯ ಬಿಡುವಾಗ ನಾರಿಯರೆಲ್ಲರು ಪೊರವಡಲುತ ಪೋಕುಪಾಯ್ಯ ಸಾರನೆ ಸುವ್ವಿ । ಪೋಕುಪಾಯ್ಯ ಸಾರನೆ ಸುರಿದು ಅವರ್ಬರಲು ಬೆಣ್ಣೆಯ ಕೊಂಡೋಡುವ ಕೃಷ್ಣ ಸುವ್ವಿ ॥ ೫ ॥ ಮತ್ತಿಯ ಮರಗಳ ಕಿತ್ತುವಾಗ ಅಲ್ಲಿ ಭೃತ್ಯರಿಗೆ ನಿಂದು ವರವಿತ್ತ ಸುವ್ವಿ । ಭೃತ್ಯರಿಗೆ ನಿಂದು ವರವಿತ್ತ ತನ್ನ ಮಿತ್ರಜನಕಾಗಿ ಗಿರಿಯೆತ್ತಿದನೆ ಸುವ್ವಿ ॥ ೬ ॥ ವೃಂದಾವನದಿ ನಿಂದು ಅಲ್ಲಿ ಚಂದಾದಿ ನಲಿವಾಗ ತನ್ನ । ಕೊಂದಪ್ಪನೆಂದು ಬಂದ ಬಕನ ಸುವ್ವಿ । ತನ್ನ ಕೊಂವಪ್ಪನೆಂದು ಬಂದ ಬಕನ ಸೀಳಿ ಬಲ್ಲಿಂದದಿ ಕೊಂದು ಬಿಸುಟನೆ ಸುವ್ವಿ ॥ ೭ ॥ ಕಲವ ತರುವ ನಿಮ್ಮ ತನ್ನಧರದಿಂದ । ಕೊಳಲನೂದುವ ಚೆಲುವಗೆ ಸುವ್ವಿ । ಕೊಳಲನೂದುವ ಚೆಲುವ ಗಾನಲೋಲ ಗೋಪಾಲಕೃಷ್ಣನಿಗೆ ಶರಣೆಂಬೆ ಸುವ್ವಿ ॥ ॥ ೮ ॥ ರಂಗ ರಾಸಕ್ರೀಡೆಯೆಂಬ ಶೃಂಗಾರ ರಸ ಬಸಿವ । ಮಂಗಳ ವಿಲಾಸವನ್ನು ರಂಜಿಸಿದ ಸುವ್ವಿ । ಮಂಗಳ ವಿಲಾಸವನ್ನು ರಂಜಿಸಿದ ಅದ ಕಂಡು ದೇ । ವಾಂಗನೆಯರೆಲ್ಲರು ತನುವ ಮರೆಪರು ಸುವ್ವಿ ॥ ೯ ॥ ಮಧುರೆಗೆ ಪೋಗಿ ಮಲ್ಲರಸುವನೀಗಿ ಮದಾಂಧ ಮಾವನ್ನ ಮಡುಹಿದೆ ಸುವ್ವಿ । ಮದಾಂಧ ಮಾವನ್ನ ಮಡುಹಿದ ಶ್ರೀಕೃಷ್ಣ । ಮುದದಿ ತನ್ನ ವರ ಮುದ್ದಿಸಿದ ಸುವ್ವಿ ॥ ೧೦ ॥ ಧರ್ಮವ ಬಿಡಬೇಡ ದುಷ್ಕರ್ಮ ಮಾಡಬೇಡ । ದುರ್ಮಾನವ ಬಿಡು ಹರಿಯ ಮೇಲಿಡು । ದುರ್ಮಾನವ ಬಿಡು ಹರಿಯ ಮೇಲಿಡು ಮನವ ಕಾಮಿನಿಯೊಳಾಡಿ ಕೆಡಬೇಡ ಸುವ್ವಿ ॥ ೧೧ ॥ ದುರುಳರ ನೋಡಿ ದೂರಕ್ಕೋಡು । ಹರಿಶರಣರಡಿಗೆ ಪೊರಮಡು ಸುವ್ವಿ । ಹರಿಶರಣರಡಿಗೆ ಪೊರಮಡು ಶ್ರೀಕೃಷ್ಣನ ಸು । ಚರಿತವ ಪಾಡುವ ರೊಳೋಡಾಡು ಸುವ್ವಿ ॥ ೧೨ ॥ ಏರಲರಿಯದವ ಮರನೇರಿ ಬಿದ್ದು ಸಾವಂತೆ ನೀರಮೀನುಗಳು ಕೆರಗುವಂತೆ ಸುವ್ವಿ । ನೀರಮೀನುಗಳು

ಕೆರಗುವಂತೆ ಮನುಜ ನೀ ಬಾರದ ಭಾಗಕ್ಕೆ ಪೊರಬೇಡ ಸುವ್ವಿ ॥ ೧೩ ॥ ಹಿಂದೆ ಪುಣ್ಯದ ಬೀಜವ ಕುಂದದೆ ಬಿತ್ತಿದರೆ । ಇಂದು ಮಹದೈಶ್ವರ್ಯ ಬಂದಿಪ್ಪೊದು ಸುವ್ವಿ ॥ ಇಂದು ಮಹದೈಶ್ವರ್ಯ ಬಂದಿಪ್ಪುದು ಬರಿದೆ ನೀ। ನೊಂದು ವಿಧಿಯ ಬೈದರೆ ಎಂದೆಂದು ಕೆಡುವೆ ಸುವ್ವಿ ॥ ೧೪ ॥ ಪರಸತಿಯ ಬಯಸಿ ದುರುಳ ಕೀಚಕ ಕೆಟ್ಟ । ಪರಧನಕ್ಕೆ ಮರುಳಾಗಿ ಕುರುರಾಯ ಸುವ್ವಿ । ಪರಧನಕ್ಕೆ ಮರುಳಾಗಿ ಕುರುರಾಯ ಕೆಟ್ಟನೆಂದು ವರವ ಭಾರತವ ನಿರುತ ಕೇಳು ಸುವ್ವಿ ॥ ೧೫ ॥ ವಾದಿಯು ಹರಿಯಾದ ಪ್ರತಿವಾದಿಯು ಹರಿಯಾದ ಭೇದವಿಲ್ಲವೆಂಬ ಮತದಲ್ಲಿ ಸುವ್ವಿ । ಭೇದವಿಲ್ಲವೆಂಬ ಮತದಲ್ಲಿ ತಾನೊಬ್ಬನೆ । ವಾದಿ ಗೆದ್ದನೆಂತು ಬಿದ್ದನೆಂತು ಸುವ್ವಿ ॥ ॥ ೧೬ ॥ ಎಲ್ಲಾ ಒಂದಾದರೆ ಶಾಲ್ಯನ್ನ ಉಂಬುವರು ಹುಲ್ಲನೇತಕೆ ಮೆದ್ದು ಬದುಕರು ಸುವ್ವಿ । ಹುಲ್ಲನೇತಕೆ ಮೆದ್ದು ಬದುಕರು ಚೇಲಾಜಾರಾ ಜಲದೊಳಾಚರಿಸಿ ಅಳುವುದೇಕೆ ಸುವ್ವಿ ॥ ೧೭ ॥ ವರ್ತಿಯ ಸಂಸಾರ ವ್ಯವಹಾರಕ್ಕೀಗ ಸ । ರ್ವತ್ರ ಜೀವಭೇದ ಉಂಟೆಂಬವಗೆ ಸುವ್ವಿ । ಸರ್ವತ್ರ ಜೀವಭೇದ ಉಂಟೆಂಬವಗೆ ಭೇದ ಸತ್ಯವಾದರೈಕ್ಯ ಯುತ್ತಿಹೊದು ಸುವ್ವಿ ॥ ೧೮ ॥ ಅತ್ತೆ ಸೊಸೆಯರಿರ್ದ ಮತ್ಸರ ಮನೆಯೊಳಗೆ । ಕತ್ತೆ ನಾಯಿಗಳಂತೇಕೆ ಬೆದಸೊರ್ೕದು ಸುವ್ವಿ । ಕತ್ತೆ ನಾಯಿಗಳಂತೇಕೆ ಬೆದಸೊರ್ದು ಅದರಿಂದ ಪ್ರತ್ಯೇಕ ಜೀವರ ಇರವೆ ಸುವ್ವಿ ॥ ೧೯ ॥ ಮಿಥ್ಯಭೇದವಾದರೆ ಅದು ಶುಕ್ತಿರೂಪ್ಯದಂತೆ ತನ್ನರ್ಥವ ತಾ ಮಾಡಲರಿಯದು ಸುವ್ವಿ ॥ ತನ್ನರ್ಥವ ತಾ ಮಾಡಲರಿಯದು ಅದರಿಂದ ನಾವೆತ್ತಿದ ದೋಷಗಳಿಗೆ ಉತ್ತರವಿಲ್ಲ ಸುವ್ವಿ ॥ ೨೦ ॥ ಸತ್ಯವಾದ ಬೊಮ್ಮ ಮಿಥ್ಯವಲ್ಲ ಮಿಥ್ಯಶಶಶೃಂಗ ಸತ್ಯವಲ್ಲ ಸುವ್ವಿ ॥ ಮಿಥ್ಯಶಶಶೃಂಗ ಸತ್ಯವಲ್ಲ ಶೃಂಗ್ಯರಡ ಜಗತ್ತಿನೊಳು ಕೊಡುವ ಕುಯುಕ್ತಿಯ ನಿನಗಾವ ಕಲಿಸಿದ ಸುವ್ವಿ॥ ॥ ೨೧ ॥ ಸತ್ತ ಹೆಣವುಂಟು ಸಾಯದ ವಸ್ತುಂಟು ಸತ್ತು ಸಾಯದ ಮತ್ರ್ಯರಿಲ್ಲ ಸುವ್ವಿ ॥ ಸತ್ಯ ಸಾಯದ ಮತ್ರ್ಯರಿಲ್ಲ ಮತ್ರ್ಯನಾಗಿ ನಿನ್ನ ಮಿಥ್ಯಭೇದವೆಂತು ನಿತ್ಯವಹುದು ಸುವ್ವಿ ॥ ೨೨ ॥ ಸತ್ಯವೆಂದರುಂಟು ಮಿಥ್ಯವೆಂದರರಿಯೆ । ಎಂಬರ್ಥಕ್ಕೆ ತಾ ಕೂಡಲರಿಯದು ಸುವ್ವಿ ॥

ಎಂಬರ್ಥಕ್ಕೆ ತಾ ಕೂಡಲರಿಯದು ಆದರಿಂದ ಅರ್ಥವೆ ಪೇಳೆ ಮಿಥ್ಯಕೆ ನಾಮಾಂತರ ಸುವ್ವಿ ॥ ೨೩ ॥ ಭರ್ತರ್ ಇಲ್ಲದವಳು ಮುತ್ತೈದೆಯೆಂಬಂತೆ ನಿನ್ನ । ಮಿಥ್ಯ ಜಗಕಿಟ್ಟ ಸತ್ಯನಾಮ ಸುವ್ವಿ ॥ ಮಿಥ್ಯ ಜಗಕಿಟ್ಟ ಸತ್ಯ ನಾಮ ನಿನ್ನ ಯುಕ್ತಿಶೂನ್ಯನೆಂದು ಸುತ್ತ ನಗುವುತಿಪ್ಪರು ಸುವ್ವಿ ॥ ೨೪ ॥ ಇಲ್ಲ ಜಗವೆಂಬುದನು ಈಗ ಕಂಡದ ಕಾರಣ । ಇಲ್ಲವಾತನ ವಾದಕ್ಕೆ ಪೊಗಳಲರಿಯದು ಸುವ್ವಿ ॥ ಇಲ್ಲವಾತನ ವಾದಕ್ಕೆ ಪೊಗಳಲರಿಯದ ಹೊಲೆಯನ ಎಲ್ಲರು । ಅರಿಯದಿದ್ದರೆ ಹೊಲೆಜಾತಿ ಹೋಕ ಸುವ್ವಿ ॥ ॥ ೨೫ ॥ ಗಿರಿಯು ಪಿರಿದಾದೇಳು ಧಳ್ಪುರಿಯು ಬೇಗೆಗೆ ಬೆಂದಾ । ಕರಿಯು ನರಿಯುದ ಕಾರಣ ಮರನ ಮುರಿವುದೆ ಸುವ್ವಿ ॥ ಕರಿಯುನರಿಯುದ ಕಾರಣ ಮರನ ಮುರಿವುದೆ ವಾದಿ ಈಪರಿಯಲಿ ನಿನ್ನ ಮಿಥ್ಯಾದಿ ಕಾರ್ಯವಾಗದು ಸುವ್ವಿ ॥ ೨೬ ॥ ಹಳಿಯ ಮಲವನೆಲ್ಲ ಮಲವೆಂದರಿಯದೊಡೆ ಮತ್ತದು ಜಲಜಾಕ್ಷಿಯರ ಸಂಗಕ್ಕೆ ಪರಿಮಳನೀವುದೆ ಸುವ್ವಿ ॥ ಜಲಜಾಕ್ಷಿಯರ ಸಂಗಕ್ಕೆ ಪರಿಮಳನೀವುದೆ । ಶೂಲದಿ ಸತ್ತ ಪೆಣನ ಸುಳಿವುತಿಪ್ಪುದೆ ಸುವ್ವಿ ॥ ೨೭ ॥ ನಾಸ್ತಿಯೆಂಬ ವಸ್ತುವ ನಾಸ್ತಿಯೆಂದರಿಯದೆ । ಅಸ್ತಿಯೆಂದು ಕಂಡರೆ ಹಸ್ತಿ ಮೂರ್ಖನು ಸುವ್ವಿ ॥ ಅಸ್ತಿಯೆಂದು ಕಂಡರೆ ಹಸ್ತಿ ಮೂರ್ಖನು ಜಗತ್ತಿನ ಮಹಂತರ ಉನ್ಮತ್ತರ ಮಾಡಿದ ಸುವ್ವಿ ॥ ॥ ೨೮ ॥ ಏಕಾಕಿನಾರಮತೆ ಯೆಂಬ ವೇದವಾಕ್ಯ ವಿವೇಕಿಗಳೆಲ್ಲರು ಬಲ್ಲರು ಸುವ್ವಿ ॥ ವಿವೇಕಿಗಳೆಲ್ಲ ಬಲ್ಲರು ಆದರಿಂದ ನಿನ್ನ ಮುಕ್ತಿ ಏಕಾಕಿಯಾದರೆ ಶೋಕಕ್ಕೊಳಗಾದೆ ಸುವ್ವಿ ॥ ೨೯ ॥ ಲೋಕದೊಳು ಹಾಳೂರ ಹಂದಿಯು ಬೇಸರ ನೋಡೋ ನಿನ್ನ ಕೈವಲ್ಯದ ಘಸಣೆ ಸುವ್ವಿ ॥ ಬೇಸರದೆ ನೋಡೊ ನಿನ್ನ ಕೈವಲ್ಯದ ಘಸಣೆ ಸಾಕು ಸಾಕು ನಮ್ಮ ಶ್ರೀವೈಕುಂಠದ ವಾಸನೆ ಲೇಸು ಸುವ್ವಿ ॥ ೩೦ ॥ ಅಲ್ಲಿ ಸಹ ಬ್ರಹ್ಮಣಾ ಸರ್ವಗಮಂಗಳಂ ಬಾರಂತೆ । ಅಲ್ಲಿ ಸರ್ವನಾದಂತೆ ಎಂಬ ಶ್ರುತಿಯೂ ಸುವ್ವಿ ॥ ಅಲ್ಲಿ ಸರ್ವನಾದಂತೆ ಎಂಬ ಶ್ರುತಿಯು ನೀ ಕೇಳಾ ಎಲ್ಲಿ ಮರ್ತ್ಯರಿಗಲ್ಲಿ ಹರಿಯನುವ್ರತರಂತೆ ಸುವ್ವಿ ॥ ೩೧ ॥ ಅಲ್ಲಿ ನರನಾರಿಯರು ಚಿನುಮಯ ಚಿಲುವರತೆ । ಅಲ್ಲಿ ಚತುರ್ಬಾಹುಗಳಾಗಿಪ್ಪರಂತೆ ಸುವ್ವಿ ॥ ಅಲ್ಲಿ

ಚತುರ್ಬಾಹುಗಳಾಗಿಪ್ಪರು ಅವರ ಶ್ರೀವಲ್ಲಭ ಲಾಲಿಸಿ ಪಾಲಿಸುವನಂತೆ ಸುವ್ವಿ ॥ ೩೨ ॥ ಉತ್ತರ ನಾಲ್ಗಡಲೊಳು ಹತ್ತಿದುಲಕ್ಷ ಯೋಜನ । ಉತ್ತುಂಗ ಶ್ವೇತದ್ವೀಪ ಪುರುಷೋತ್ತಮನ ಸುವ್ವಿ ॥ ಉತ್ತುಂಗ ಶ್ವೇತದ್ವೀಪ ಪುರುಷೋತ್ತಮನ ಪಟ್ಟಣ ಅಲ್ಲಿ ಮುತ್ತಿನಂತೆ ಹೊಳೆವ ಮುಕ್ತರೀರ್ವರು ಸುವ್ವಿ ॥ ೩೩ ॥ ಅನಂತಾಸನವೆಂದು ಮತ್ತೊಂದು ನಗರ ಕೃಷ್ಣಗೆ । ಘನ್ನೋದಕದ ಮೇಲೆ ಮಿಂಚುತಿಪ್ಪದು ಸುವ್ವಿ । ಘನ್ನೋದಕದ ಮೇಲೆ ಮಿಂಚುತಿಪ್ಪದು ಅಲ್ಲಿ ಮಾಸ್ಯ ಮನೆಯುಲಿ ಮುಕ್ತರು ಸುಮನೆನಿಸುತಿಪ್ಪರು ಸುವ್ವಿ ॥ ೩೪ ॥ ವಾದಿರಾಜನಾಳ್ವ ಹಯವದನ ತಾನೆ ಪೇಳ್ದ ಜಗಬಿರುದಿನ ಸುವ್ವಾಲೆಯು ಪದವಿದು ಸುವ್ವಿ ॥ ಜಗಬಿರುದಿನ ಸುವ್ವಾಲೆಯು ಪದವಿದು ಜಗದೊಳಗೆ ವಾದಿಸುವರ ಬಾಯ ಮುದ್ರಿಸುವದು ಸುವ್ವಿ ॥ ೩೫ ॥ ಮಂಗಳಂಗಳಾಗಲಿ ಅಮಂಗಳಂಗಳು ಹೋಗಲಿ । ರಂಗನಂಗೀಕರಿಸಲಿ ಅನೇಕ ಶುಭಂಗಳು ಬೆರಸಲಿ ಸುವ್ವಿ ॥ ಅನೇಕ ಶುಭಂಗಳು ಬೆರಸಲಿ ಕಣ್ಣಿಗಾನಂದ ತೋರಲಿ ಮೇಲುತ್ತುಂಗ ಸುಖಂಗಳ ಕೊಡಲಿ ॥ ೩೬ ॥ ವಾದಿರಾಜ ಪೇಳ್ದ ಜಗಬಿರುದಿನ ಸುವ್ವಾಲೆಯು । ಮೇದಿನಿಯೊಳಾವ ಕಲಿವಾನು ಸುವ್ವಿ । ಮೇದಿನಿಯೊಳಾವ ಕಲಿವನವನ ಪಾದಕ್ಕೆಬಿದ್ದ ಕಟ್ಟಿ ಜಗವ ಗೆಲಿಸುವದು ಸುವ್ವಿ ॥ ೩೭ ॥ ಶ್ರೀಃ ॥

೧೫೪. ರಾಗ ನಾದನಾಮಕ್ರಿಯೆ, ಅಟತಾಳ.

ನಿನ್ನಿಂದ ನಾನು ಜನಿಸಿದೆನೊ ರಂಗ ॥ ಪಲ್ಲ ॥ ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ ॥ ನಿನ್ನಾದೆ ತಪ್ಪೊ ಗೋವಿಂದ ॥ ಅನುಪಲ್ಲ ॥ ಜನನಿಯ ಜಠರದಿ ನವಮಾಸವು । ಘನತೆಯೊಳ್ಪೋಷಿಸುವರು ಯೆನ್ನನು ॥ ಜನನಿ ಜನಿಸೆ ನಾ ಜನಿಸಲಾರೆನೆಂದೆ । ವನಜಾಕ್ಷ ನೂಕಿದವನು ನೀನಲ್ಲವೇ ಸ್ವಾಮಿ ॥ ೧ ॥ ಎಲುಬುಗಳೆಲ್ಲ ಜತೆಯು ಮಾಡಿ ನರಬಿಗಿದು ತೊ । ಗಲಿನ್ಹೊದಿಸಿದವನು ನೀನಲ್ಲವೆ ॥ ಮಲಮೂತ್ರದೊಳ್ ನಾ ಜನಿಸಲಾರೆನೆಂದೆ ಕ । ಮಲಾಕ್ಷ ನೂಕಿದವನು ನೀನಲ್ಲವೇ ॥ ॥ ೨ ॥ ಜನಿಸಿದ ಇಂದಿನ ಪರಿಯಂತರ । ಘನದಿ ನೀ ಪಾಲಿಸುತಿರೆ ಎನ್ನನು ॥ ಅನುಮಾನಕ್ಕೆ ಬೋಧಿಸುತಿರೆ ನಾ । ಅನುಭವಿಸಿದೆನೊ

ಜೀವನು ನಿನ್ನನು ಬಿಡೆ ॥ ೩ ॥ ಅಂಧಕನ ಕೈಯಲ್ಲಿ ಕೋವಿತ್ತು । ಮುಂದಾಳು ತಗ್ಗಿನಲಿ ಕೆಡಹಲು ॥ ಅಂಧಕನಲಿ ತಪ್ಪೊ ಮುಂದಾಳಿನಲಿ ತಪ್ಪೊ । ಹಿಂದಾಡಬೇಡ ಎನ್ನಲ್ಲಿ ತಪ್ಪಿಲ್ಲವೋ ರಂಗ ॥ ೪ ॥ ಕಂದನ್ನ ತಾಯಿ ಆಡಿಸುತಿರುವಾಗ । ಕಂದ ಭಾವಿಯೊಳ್ ದಿಂ ನೋಡಲು ॥ ಬಂದು ಬೇಗದಿಂದ ಎತ್ತದಿದ್ದ ಮೇಲೆ । ಕಂದನ ತಪ್ಪೊ ತಾಯಿಯ ತಪ್ಪೊ ಗೋವಿಂದ ॥ ೫ ॥ ಭಾರ ನಿನ್ನದು ಇದು ನಿನ್ನದು ರಂಗ । ನಾರಿ ಮಕ್ಕಳು ಮನೆ ನಿನ್ನದಯ್ಯ ॥ ಕ್ಷೀರದೊಳಗೆ ಅದ್ದು ನೀರಿನೊಳಗೆ ಅದ್ದು । ಹೇರ ನೊಪ್ಪಿಸಿದರೆ ಸುಂಕವಿಲ್ಲ ಪರಮಾತ್ಮ ॥ ೬ ॥ ನ್ಯಾಯವಾದರೆ ದುಡುಕು ನಿನ್ನದು ರಂಗ । ಅ । ನ್ಯಾಯವಾದರು ಯಾರು ಪೇಳುವರು ॥ ಕಾಯ ಜನ ಶ್ರೀರಾಯ ಹಯವದನ । ಹೇಯಮಾಡದೆ ಎನ್ನ ಈಗ ಸಲಹೋ ದೇವಾ ॥ ೭ ॥ ಶ್ರೀಃ ॥

## ೧೫೫. ರಾಗ ಶಂಕರಾಭರಣ, ಝಾಪುತಾಳ.

ಎನಗೆ ನೀ ಬಂಧು ಎಂದೆಂದು ದಯಾಸಿಂಧು ॥ ಪಲ್ಲ ॥ ತಮನಾ ಕೊಂದೆ ಶ್ರುತಿತತಿಯ ನೀ ತಂದೆ ಕೂ । ರ್ಮನಾಗಿ ಗಿರಿಯನೆತ್ತಿದೆ ॥ ಕ್ಷಮೆಯ ಪ್ರಾಪ್ತಿ ಹಿರಣ್ಯಕನ ಕಿತ್ತೆ ತ್ರಿವಿ । ಕ್ರಮನಾಗಿ ಬೆಳದೆ ತ್ರೈಲೋಕ್ಯವನಳದೆ ॥ ೧ ॥ ರಾಯರಾಯರ ಗೆಲಿದೆ ರಾವಣ ಬಲವನು ಮುರಿದೆ । ಮಾಯಾದಿ ಗೋವಳನಾದೆ ॥ ಸ್ತ್ರೀಯರ ಕೆಡಿಸಿದೆ ಕಲಿಯಾಗಿ ಕೊಲಿಸಿದೆ । ಕಾಯಜನ ತಾತ ಕಾಮಿತ ಫಲದಾತಾ ॥ ೨ ॥ ಸುರರ ಶಿರೋರನ್ನ ಕರುಣಾ ಸಂಪನ್ನ ಮಾನವರ ಮಾನ್ಯ । ಶಿರಿಹಯವದನ್ನ ಪರಮ ಪಾವನ್ನ ॥ ಪರಿಪೂರ್ಣ ಶಶಿವರ್ಣ । ನಿರತಾ ನೀಲದ ವರ್ಣ ನೀ ಕಾಯೋ ಎನ್ನ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೫೬. ರಾಗ ಸೌರಾಷ್ಟ್ರ, ಆದಿತಾಳ.

ಆನಂದಮಯಗೆ ಚಿನ್ಮಯಗೆ ಆದಿನಾರಾಯಣಗಾರತಿ ಯೆತ್ತಿರೆ ॥ ॥ ಪಲ್ಲ ॥ ವೇದವ ತಂದು ಬೆಟ್ಟವ ಪೊತ್ತು ಧಾರುಣಿಯ । ಸಾಧಿಸಿ ಕಂಬದಿಂ ಬಂದವಗೇ ॥ ಭೂದಾನವ ಬೇಡಿ ನೃಪರ ಸಂಹರಿಸಿದ । ಆದಿ

ಮಾರುತಿಗಾರತಿ ಯೆತ್ತಿರೆ ॥ ೧ ॥ ಇಂದುವದನೆಸಹಿತ ಅರಣ್ಯದೊಳಗಾಡಿ । ನಂದಗೋಕುಲದಲ್ಲಿ ನಲಿದವಗೆ ॥ ಮಂದಗಮನೆಯರ ಮುಂದೆ ನಿರುವಾಣದಿ । ನಿಂದ ಮಾರುತಿಗಾರತಿ ಯೆತ್ತಿರೆ ॥ ೨ ॥ ತುರಗವನೇರಿ ದುಷ್ಟರ ಶೀಳಿ ಭಕ್ತರ । ಪೊರೆವ ಮಂಗಳಹಯವದನನಿಗೆ ॥ ವರವೇಲಾಪುರ ಚನ್ನಿಗರಾಯನ । ಚರಣಕಮಲಕಾರತಿ ಯೆತ್ತಿರೆ ॥ ೩ ॥ ಶ್ರೀ ॥

### ೧೫೭. ರಾಗ ಶಂಕರಾಭರಣ, ಅಟತಾಳ.

ಜೋಜೋ ಜೋಜೋ ಜೋಮುಖ್ಯಪ್ರಾಣಾ । ಜೋಜೋ ಮಲ್ಲರಗಂಟಲಗಾಣಾ ॥ ಜೋಜೋ ರಾಕ್ಷಸಶಿಕ್ಷ ಕಲ್ಯಾಣಾ । ಜೋಜೋ ಸಕಲಸುವಿದ್ಯಪ್ರವೀಣಾ ॥ ಪಲ್ಲ ॥ ಸೋಜಿಗಪೂರ್ಣ ಬಾಲಬ್ರಹ್ಮಚಾರೀ । ಮಾಜಗವಾಳಿದ ಕಪಿರೂಪಧಾರೀ ॥ ತೇಜಮುತ್ತಿನ ಕವಚಕುಂಡಲಧಾರೀ । ನೈಜಭಕ್ತರ ಸರ್ವರೋಗನಿವಾರೀ ॥ ೧ ॥ ಭೂಮಿಭಾರವನಿಳುಹಲು ಬಂದ ಭೀಮಾ । ಕಾಮಿ ಕೀಚಕನ ಕುಟ್ಟಿದ ರಣಧಾಮಾ ॥ ಕಾಮಿನಿ ದ್ರೌಪದಿ ಕಷ್ಟನಿರ್ಧೂಮಾ । ಕಾಮಿತಾರ್ಥವನೀವ ಕಲ್ಪತರುಭೀಮಾ ॥ ೨ ॥ ಸೌಂದರ್ಯರೂಪ ಶ್ರೀಮದಾನಂದಾ । ತಂದೆ ಹಯವದನನ ಮೋಹದ ಕಂದಾ ॥ ಬಂದುಡುಪಿಯಲ್ಲಿ ನೆಲೆಯಾಗಿ ನಿಂದಾ । ನಿದ್ರೆಯ ಮಾಡಯ್ಯ ಹರಿಧ್ಯಾನದಿಂದಾ ॥ ೩ ॥ ಶ್ರೀ ॥

### ೧೫೮. ರಾಗ ನವರೋಜು, ಅಟತಾಳ.

ಜೋಜೋ ಕಂದರ್ಪಕೋಟಿಲಾವಣ್ಯನೇ । ಜೋಜೋ ವೃಂದಾರಕಶಿರೋರನ್ನನೇ ॥ ಜೋಜೋ ನಂದನಸುಕೃತದ ಫಲವೇ । ಜೋಜೋ ಮುನಿಮನಮಧುಪಕಮಲವೇ ॥ ಜೋಜೋ ॥ ಪಲ್ಲ ॥ ಪ್ರಳಯಜಲಧಿ ನೀನಾಲದೆಲೆಯ ಮೇಲೆ । ಹಲವು ಜೀವರು ನಿನ್ನ ಉದರದೊಳಿರಲೂ ॥ ಕೆಲವು ದಿನದಿ ಯೋಗನಿದ್ರೆಯೊಳಗಿರೆ । ಒಲವಿಂದ ಸೃಜಿಸುವೆನೆಂದು ನೇಮಿಸುವೇ ॥ ೧ ॥ ಪ್ರಕೃತಿಯ ಮೂಲಕಾರಣವನ್ನೆ ಮಾಡಿ । ಸಕಲ ತತ್ವಗಳ ಸಮ್ಮೇಳದಿ ಕೂಡೀ ॥ ವಕಲಿಸದಂತೆ ತನ್ಮಾತ್ರೆಯನು ಹೂಡಿ । ಅಖಿಲೇಶ ಮಹತ್ತತ್ವಗಳ ನಿರ್ಮಿಸಿದೇ ॥ ೨ ॥ ಮಹತ್ತತ್ವದಿಂದ ಅಹಂಕಾರ

ಹುಟ್ಟಿ । ಅಹಂಕಾರದಿಂದ ವೈಕಾರಿಕಮೊದಲಾದ ॥ ತ್ರಿವಿಧತತ್ವಗಳ ನಿರ್ಮಾಣವಮಾಡಿ । ಮಹಾಮಹಿಮೆಯ ಮೆರೆದೆ ಜಗವರಿಯೆ ॥ ೩ ॥ ಇಪ್ಪತ್ತು ನಾಲ್ಕು ಐದಾರುತತ್ವಗಳಿಂದ । ತಪ್ಪದೆ ಬ್ರಹ್ಮಾಂಡವ ನಿರ್ಮಿಸಿದೆ ॥ ಅಪ್ಪುಶಯನನಾಗಿ ನಾಭಿಕಮಲದಿಂದ । ಅಪ್ಪ ಬ್ರಹ್ಮನ ಪ್ರಸವಿಸಿದೆ ನೀನಂದೂ ॥ ೪ ॥ ಒಂದು ಮೂರುತಿಯಿಂದ ಸೃಷ್ಟಿಯ ಮಾಡಿಮ । ತ್ತೊಂದು ಮೂರುತಿಯಿಂದ ಪಾಲನೆ ಮಾಡಿ ॥ ಒಂದು ಮೂರುತಿಯಿಂದ ಸಂಹಾರವನು ಮಾಡಿ । ಒಂದೊಂದು ಮಹಿಮಾನಂತಾದ್ಭುತವೆ ॥ ೫ ॥ ಒಂದು ರೋಮಕೂಪದಲಿ ಬ್ರಹ್ಮಾಂಡವಾ । ಇಂದಿರೆ ಅನಂತಕೋಟಿನಾಮಗಳಿಲ್ಲಾ ॥ ಬಂದು ಗೋಕುಲದಲ್ಲಿ ಶಿಶುವಾಗಿ ತೋರಿದೆ ಆ । ನಂದದಿಂದಲಿ ಶರಣೆಂದರು ಸುರರು ॥ ೬ ॥ ಬೊಮ್ಮರುದ್ರಾದಿ ದೇವತೆಗಳಿಗವಸರ । ಒಮ್ಮೆ ಕಾಣರು ಸಿರಿದಮ್ಮ ಚೆಲುವನಾ ॥ ಒಮ್ಮಾನದಿಂದ ನೋಡೆನೆಂಬ ಭರದಿಂದ । ರಮ್ಮ ಮುಖವ ತಗ್ಗಿಸಿ ನಾಚಿದಳೂ ॥ ೭ ॥ ಜನನಮರಣಭಯದಿಂದ ದೇವತೆಗಳು । ಅನುದಿನ ನಿನ್ನ ಪೂಜೆಯ ಮಾಡಲು ॥ ಪುನರಾವೃತ್ತಿರಹಿತವಾದ ಫಲವಿತ್ತೇ । ಮನುಜನಂತೆ ತೋರುವದೇನುಚಿತ್ರಾ ॥ ೮ ॥ ಆಲೋಚನೆಯಿಂದ ಸರ್ವವಿಷಯದಿಂದ । ಲೀಲೆಯಿಂದಲಿ ಪಾಡಿ ಕಮಲಸಂಭವನಾ ॥ ಪೋಲುವಮಾಡದಂತೆ ಒಳಿತಾಗಿ ತಲೆಬಾಗೆ । ಮೂಲೋಕವ ಕೃಪೆಯಿಂದ ಪಾಲಿಸಿದೆ ॥ ೯ ॥ ದಶದಿಕ್ಕ ನೋಡುತ್ತ ಭಯದಿಂದ ಕಮಲಜ । ಬಿಸಜನಾಳದೊಳಗಿರ್ದ ದಾರಿಯ ಕಾಣದೆ ॥ ದಶಶತವರುಷ ನಿಮ್ಮನು ಧ್ಯಾನಿಸುತಿರೆ । ವಸುಧೀಶ ನಿಮ್ಮ ನಿಜವ ತೋರಿದಿರಿ ॥ ೧೦ ॥ ನಾಮಕರಣದ ದಿವಸ ಬ್ರಹ್ಮಾದಿಸುರರು । ಈಮಾಶಿಶುವ ನೋಡೇವೆಂಬ ಭರದಿಂದ ॥ ಆಮಹಾಸ್ತೋಮವೆಲ್ಲವು ಕೂಡಿಬರಲು ॥ ಈಮಹಾಶಿಶುವ ನೋಡಿ ವರತಿರ್ಯಲ್ಲೀ ॥ ೧೧ ॥ ಜಾತಕರ್ಮವ ಮಾಡಿ ಮಧುವ ಬಾಯೊಳಗಿಟ್ಟು । ಪೊತ್ತುಮರನ ಗೊಬ್ಬಿನಲಿ ಮಲಗಿದ್ದು ಸಾ ॥ ಕ್ಷಾತು ಶ್ರೀನಾರಾಯಣನವತಾರವೆಂದು । ಮಾತೆಯ ಮೊಲೆಹಾಲನುಂಡ ಬೇಗದಲೀ ॥ ೧೨ ॥ ವ್ಯಾಸಧೌಮ್ಯಾಚಾರ್ಯರ್ವರಲಿದು ಮಂತ್ರಗಳಿಂದ ।

ಸಾಸಿರಕೋಟ್ಯನಂತನಾಮಗಳುಳ್ಳ ॥ ವಾಸುದೇವ ಕೃಷ್ಣನೆಂಬ ನಾಮವನಿಟ್ಟು । ಸೂಸಿದರಕ್ಷತೆಯ ಸುಮುಹೂರ್ತದಲೀ ॥ ೧೩ ॥ ನಂದ ಯಶೋದೆ ವಸುದೇವ ದೇವಕಿಯರು । ಹಿಂದೆ ಮಾಡಿದ ಸುಕೃತ ಫಲವಾಯಿತೆಂದೂ ॥ ಇಂದಿರಾಪತಿ ಜನಿಸಿದನೆಂಬ ಹರುಷದಿ । ಬಂದ ಬ್ರಾಹ್ಮಣರನ್ನ ದ್ರವ್ಯದಿ ದಣಿಸಿದರೂ ॥ ೧೪ ॥ ಕ್ಷೀರಾಂಬುಧಿಯನ್ನೆ ತೊಟ್ಟಿಲ ಮಾಡಿ । ಓರಂತೆ ನಾಲ್ಕುವೇದಗಳನೇಣಾನೆ ಮಾಡಿ ॥ ಧೀರ ಶೇಷನು ಬಂದು ಹಾಸಿಗೆಯಾಗಲು । ನಾರಿಯರೊಡನೆ ಮಲಗಿದೆಯೊ ಹಯವದನಾ ॥ ೧೫ ॥ ಈರಾರುದಿನದಲ್ಲಿ ಭಾರತಿ ಪಾರ್ವತಿ । ಓರಂತೆ ಶಚಿ ರತಿ ಮೊದಲಾದ ಸತಿಯರು ॥ ನಾರಾಯಣ ಪರದೇವತೆಯೆಂದು । ನಾರಿಯರೆಲ್ಲ ಪಾಡಿದರು ಹರುಷದಲೀ ॥ ೧೬ ॥ ಪುಟ್ಟ ಪಾದದಲೊಮ್ಮೆ ತೊಟ್ಟಿಲನೊದೆವುತ್ತ । ದುಷ್ಟಶಕಟನು ನುಚ್ಚುನುರಿಯಾಗಿ ಬೀಳೆ ॥ ಕಟ್ಟಿದ ವರಳೊಳು ಮರಗಳೆರಡು ಬೀಳೀ । ಕೆಟ್ಟೇವೆಂದರು ಗೋವಳಗೋಪಿಯರು ॥ ೧೭ ॥ ಸಿರಿ ಭಾಗ್ಯರೌಪ್ಯಪುರದೊಳು ಹೆಚ್ಚಲೆಂದು । ವರಮುನಿಗಳೆಲ್ಲ ಪೂಮಳೆಗರೆಯೇ ॥ ವರಋಷಿಗಳೆಲ್ಲರು ಶಿರಗಳ ತೂಗೇ । ಗುರುವಾದಿರಾಜರಿಗೊಲಿದೆ ಹಯವದನಾ ॥ ಜೋ ಜೋ ॥ ೧೮ ॥ ಶ್ರೀಃ ॥

## ೧೫೯. ರಾಗ ಪೂರ್ವಿ, ಅಟತಾಳ.

ಮಂಗಳ ಮಂದಾಕಿನಿಗೆ ಮಂಗಳಾ । ಮಂಗಳ ತರಂಗಿಣಿಗಂಗೆಗೆ ಮಂಗಳಾ ॥ ಪಲ್ಲ ॥ ಮುನ್ನ ತ್ರಿವಿಕ್ರಮನಂಗುಟದಿ । ಚನ್ನಾಗಿ ಜನಿಸಿ ಚತುರ್ಮುಖನ ॥ ಚಿನ್ನಪಾತ್ರೆಯಲಿರ್ದ ಶಿವನ ಮುಡಿಗೊಲಿದು । ಜಹ್ನುಮುನಿಯುದರ ಪ್ರೋಕ್ಷ ಜಾಹ್ನವಿಗೆ ॥ ೧ ॥ ಭಗೀರಥನ ಸ್ತುತಿಗೊಲಿದು ಬಂದು । ಸಗರರಾಯನ ಕುಲವುದ್ಧರಿಸಿ ॥ ಸೊಗಸಾಗಿ ಸಾಸಿರಮುಖದಿಂದಂಬುಧಿಯ । ಬಗೆಯಿಂದ ಕೂಡಿದ ಭಾಗೀರಥಿಗೆ ॥ ೨ ॥ ದೇವಋಷಿಮಾನವರನೆಲ್ಲ । ಪಾವನ ಮಾಡಿ ಬ್ರಹ್ಮಾಂಡದೊಳು ॥ ಶ್ರೀವಾದಿರಾಜಗುರುಶೇಖರನಿಗೊಲಿದು । ದಾವಾಗ ಧವಳಗಂಗೆಯೆನಿಸಿಕೊಂಬಳಿಗೆ ॥ ॥ ೩ ॥ ಧರೆಯೊಳಗಿದ್ದ ಮಹನದಿಗಳಲಿ । ವರುಷಮಾನದಿನ ಹರುಷದಲಿ ॥

ಸರುವತೀರ್ಥಗಳಲ್ಲಿ ಸಾನ್ನಿಧ್ಯಳಾಗಿ ನೀ । ಸರುವೇಶ್ವರನ ಪದವಿ ತೋರ್ಪಳಿಗೆ ॥ ೪ ॥ ಸಿರಿಮುದ್ದುಹಯವದನರಾಯನ । ಕರುಣಾಕಟಾಕ್ಷದಿ ಕಲಿಯುಗದಿ ॥ ವರಭಕ್ತರಿಗೆಲ್ಲ ಒಲಿದು ಪ್ರತ್ಯಕ್ಷದಿ । ಪರವೈಶ್ವರ್ಯದಿ ಪೂಜೆಗೊಂಬಳಿಗೆ ॥ ೫ ॥ ಶ್ರೀಃ ॥

## ೧೬೦. ರಾಗ ಸೌರಾಷ್ಟ್ರ, ಆದಿತಾಳ.

ಮಂಗಳ ಜಯ ಜಯ ಜಯ ಮಂಗಳಾ ॥ ಪಲ್ಲ ॥ ಮಂಗಳ ಮೂರ್ತಿಗೆ ಮಂಗಳ ಕೀರ್ತಿಗೆ । ಮಂಗಳ ದೇವಿಯುರದಪನಿಗೆ ॥ ಮಂಗಳ ಮನುಮಥಪಿತನಿಗೆ ಮಂಗಳಾ । ಮಂಗಳ ಮಹಾಮಹಿಮಗೆ ಮಂಗಳಾ ॥ ॥ ೧ ॥ ಅಚ್ಯುತಾನಂತಗೋವಿಂದಗೆ ಮಂಗಳಾ । ಸಚ್ಚರಿತ್ರನಿಗೆ ಸಕಲ ಮಂಗಳಾ ॥ ಸಚ್ಚಿದಾನಂದಸ್ವರೂಪಗೆ ಮಂಗಳಾ । ಅಚ್ಚಹೃದಯನಿಗೆ ಅತಿಮಂಗಳಾ ॥ ೨ ॥ ಕೇಶವನಾರಾಯಣನಿಗೆ ಮಂಗಳಾ । ಕೇಶಿಸೂದನನಿಗೆ ಅತಿಮಂಗಳಾ ॥ ಶೇಷಶಯನಹೃಷೀಕೇಶಗೆ ಮಂಗಳಾ । ವಾಸುದೇವನಿಗೆ ಸಕಲಮಂಗಳಾ ॥ ೩ ॥ ದಾನವವೈರಿ ಜಗದೀಶಗೆ ಮಂಗಳಾ । ಹೀನತೆ ಇಲ್ಲದವಗೆ ಹೆಚ್ಚು ಮಂಗಳಾ ॥ ಆನಂದತೀರ್ಥಮುನಿಯ ಮುದ್ದುಕೃಷ್ಣಗೆ । ಶ್ರೀನಾರಿಯರೆತ್ತುವ ಶುಭಮಂಗಳಾ ॥ ೪ ॥ ನಿಗಮವ ತಂದ ಮತ್ಸ್ಯನಿಗೆ ನಿತ್ಯಮಂಗಳಾ । ನಗಧರಕೂರ್ಮಗೆ ಅತಿಮಂಗಳಾ ॥ ಜಗತಿಯನೆತ್ತಿದ ವರಹಗೆ ಮಂಗಳಾ । ಮಗುವ ಕಾಯ್ದ ನರಸಿಂಹಗೆ ಮಂಗಳಾ ॥ ೫ ॥ ದಾನವ ಬೇಡಿದ ಸ್ವಾಮಿಗೆ ಮಂಗಳಾ । ಕ್ಷೋಣೀಶಾಂತಕನಿಗೆ ಸಕಲಮಂಗಳಾ ॥ ಜಾನಕಿರಮಣ ರಾಮಗೆ ರಮ್ಯಮಂಗಳಾ । ಶ್ರೀನಂದಸುತನಿಗೆ ಶುಭಮಂಗಳಾ ॥ ೬ ॥ ಬುದ್ಧವತಾರದಿ ಬಾಳ್ದಗೆ ಮಂಗಳಾ । ಸದ್ಧರ್ಮಮೂಲಸ್ವಾಮಿಗೆ ಮಂಗಳಾ ॥ ಮಧ್ವವಲ್ಲಭ ಹಯವದನರಾಯನಿಗಿಂಥ । ಶುದ್ಧಸ್ವಭಾವನಿಗೆ ಶುಭಮಂಗಳಾ ॥ ೭ ॥

## ೧೬೧. ರಾಗ ಭೈರವಿ, ಝಂಪೆತಾಳ.

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥ ವಸುದೇವತನಯನಿಗೆ ವೈಕುಂಠನಿಲಯನಿಗೆ । ಕುಸುಮನಾಭನಿಗೆ ಕೋಮಲರೂಪಗೇ ॥

ಯಶೋದೆಯ ನಂದನಗೆ ಇಂದಿರಾರಮಣನಿಗೆ। ವಸುಧೆಯೊಳೊಪ್ಪುವಾ ನರಸಿಂಹಗೇ ॥ ೧ ॥ ಕನಕಕಿರೀಟನಿಗೆ ಕಸ್ತೂರಿತಿಲಕನಿಗೆ। ಕನಕಕುಂಡಲಗೆ ಕೌಸ್ತುಭಹಾರಗೆ ॥ ಕನಕಾಂಬರಧರಗೆ ಘನಮಹಿಮೆಯುಳ್ಳವಗೆ। ಸನಕಾದಿವಂದ್ಯ ನರಸಿಂಹಗೇ ॥ ೨ ॥ ಪಂಕಜನಾಭನಿಗೆ ಪಾಂಚಾಲಿ ರಕ್ಷಕಗೆ। ಲಂಕೆಯನು ವಿಭೀಷಣನಿಗಿತ್ತವನಿಗೆ ॥ ಕುಂಕುಮಾಂಕಿತನಿಗೆ ಕುವಲಯನೇತ್ರನಿಗೆ। ಬಿಂಕದಲಿ ಮೆರೆವ ಮುದ್ದು ನರಸಿಂಹಗೇ ॥ ೩ ॥ ಪಕ್ಷಿವಾಹನನಿಗೆ ಪರಮಪಾವನನಿಗೆ। ಕುಕ್ಷಿಯೊಳು ಜಗವನಿಂಬಿಟ್ಟವನಿಗೆ ॥ ಲಕ್ಷ್ಮೀಕಾಂತನಿಗೆ ರಾಜೇಂದ್ರವಂದಿತಗೆ। ಲಕ್ಷಣದೊಳೊಪ್ಪುವ ನರಸಿಂಹಗೇ ॥ ೪ ॥ ಭಕ್ತವತ್ಸಲನಿಗೆ ಸಕಲವನು ರಕ್ಷಿಪಗೆ। ಮುಕ್ತಿದಾಯಕಗೆ ಚಿನ್ಮಯರೂಪಗೆ ॥ ಮಿತ್ರರುಗ್ಮಿಣಿಸತ್ಯಭಾಮೇರರಸನಿಗೆ। ನಿತ್ಯಕಲ್ಯಾಣ ಶ್ರೀಹಯವದನಗೇ ॥ ೫ ॥ ಶ್ರೀಃ ॥

ಸರ್ವೇ ಜನಾಃ ಸುಖಿನೋ ಭವಂತು।
ಸಮಸ್ತಸನ್ಮಂಗಳಾನಿ ಭವಂತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

---

**ವಾದಿರಾಜರ ಕೀರ್ತನೆಯ ೧ನೇ ಭಾಗವು**

**ಸಂಪೂರ್ಣವು.**

॥ ಶ್ರೀಕೃಷ್ಣಾರ್ಪಣಮಸ್ತು ॥

---

ಈ ಪುಸ್ತಕವು

ಪಾವಂಜೆ ಗುರುರಾವ್,

ಇವರ

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ

ಮುದ್ರಿಸಲ್ಪಟ್ಟು,

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ

ಪ್ರಕಟಿಸಲ್ಪಟ್ಟಿತು.

1925.

ಶಾಲೀವಾಹನಶಕ ೧೮೪೭.

